## ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ



# ಬುದ್ಧಿಮಾಂದ್ಯತೆ






ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು 570006

ಪರಿಕಲ್ಪನೆ ಮತ್ತು ಪ್ರಧಾನ ಸಂಪಾದಕರು : ಪ್ರೊ. ಎಂ. ಜಯರಾಮ್

ಪ್ರಕಾಶಕರು : ಪ್ರೊ. ಎಂ. ಜಯರಾಮ್
ನಿರ್ದೇಶಕರು
ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ,
ಮೈಸೂರು 6

ಬರವಣಿಗೆ ಹಾಗೂ ಸಂಕಲನ : ಡಾ. ಐ. ಪಿ. ಗೌರಮ್ಮ
ಡಾ. ಎಸ್. ವೆಂಕಟೇಶನ್

ಪುಸ್ತಕ ವಿನ್ಯಾಸ/ಮುಖಪುಟ
ಮತ್ತು ತಾಂತ್ರಿಕ ಸಲಹೆ : ಎಂ. ಜಿ. ಮಂಜುಸ್ವಾಮಿ

ಚಿತ್ರಗಳು : ಜಿ. ವಿ. ಗಣೇಶಯ್ಯ

ಬೆಲೆ: ರೂ. 50/-

ಪ್ರಕಟ

ಬೆಳವಣಿಗೆ ನ್ಯೂನತೆಗಳುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ

ಭಾಗ-2 ಘಟಕ-4

# ಬುದ್ಧಿಮಾಂದ್ಯತೆ





ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು-6

# ನಮ್ಮ ಧ್ಯೇಯ

1966ರಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸ್ವಾಯತ್ತ ಸಂಸ್ಥೆಯಾಗಿ ಹುಟ್ಟು ಪಡೆದ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್ ಶ್ರವಣ ನ್ಯೂನತೆಗಳುಳ್ಳ ಜನರಿಗಾಗಿ ಸೇವೆ ಸಲ್ಲಿಸುತ್ತಿದೆ. ಚಿಕಿತ್ಸೆ, ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ.

ನಮ್ಮ ದೇಶದ ಶೇ.10 ರಷ್ಟು ಮಕ್ಕಳು ಒಂದಲ್ಲಾ ಒಂದು ರೀತಿಯ ಮಾತು-ಭಾಷೆ-ಕೇಳುವಿಕೆಯ ತೊಂದರೆಗಳಿಗೆ ತುತ್ತಾಗಿದ್ದಾರೆ ಎಂದು ಅಂಕಿ-ಅಂಶಗಳಿಂದ ತಿಳಿದು ಬರುತ್ತದೆ. ಇಂತಹ ಮಕ್ಕಳನ್ನು ಶೀಘ್ರವಾಗಿ ಗುರುತಿಸಿ, ಭವಿಷ್ಯದಲ್ಲಿ ಅವರಿಗೆ ಸಾಮಾನ್ಯ ಜೀವನ ನಡೆಸಲು ಸಾಧ್ಯವಾಗುವಂತೆ ಚಿಕಿತ್ಸೆ ಹಾಗೂ ತರಬೇತಿ ನೀಡುವುದು ಅತಿ ಅವಶ್ಯಕ. ಆದರೆ ಈ ರೀತಿಯ ಚಿಕಿತ್ಸೆ ಮತ್ತು ತರಬೇತಿ ನೀಡುವ ತಜ್ಞರ ಸಂಖ್ಯೆ ಬಹಳ ಕಡಿಮೆ ಇರುವುದು ವಾಸ್ತವ ಸಂಗತಿ. ಇಂತಹ ವಾಕ್-ಶ್ರವಣ ತಜ್ಞರ ಸೇವೆ ಎಲ್ಲಿ ಬೇಕೋ ಅಲ್ಲಿ ಸಿಗುತ್ತಿಲ್ಲ. ಹಳ್ಳಿಗಳಲ್ಲಿ ಕೆಲಸ ಮಾಡಲು ಮುಂದೆ ಬರುವವರೇ ಇಲ್ಲ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ತೊಂದರೆ ಇರುವ ಲಕ್ಷಾಂತರ ಜನರನ್ನು ನಮ್ಮ ಸಲಹೆ ಸೂಚನೆ ಸೇವೆಗಳನ್ನು ಪಡೆಯಲು ನಗರ ಪ್ರದೇಶಗಳಲ್ಲಿ ಇರುವಂತಹ ನಮ್ಮ ಸಂಸ್ಥೆಗಳಿಗೆ ಬನ್ನಿ ಎಂದು ಕರೆಯುವುದು ಸಮಂಜಸವಲ್ಲ. ಆದುದರಿಂದ ಮಾತು-ಕೇಳುವಿಕೆಯ ತೊಂದರೆಗಳಿರುವ ಜನರ ಸುತ್ತಮುತ್ತ ಇರುವ ಸಮುದಾಯದ ಒಂದು ವರ್ಗದ ಜನರನ್ನು ಆರಿಸಿ ಅವರಿಗೆ ಸೂಕ್ತ ತರಬೇತಿ ನೀಡಿದರೆ, ನಮ್ಮ ಗ್ರಾಮೀಣ ಪ್ರದೇಶದ ಜನರ ಬವಣೆ ಸ್ವಲ್ಪವಾದರೂ ನೀಗಬಹುದೆಂದು ನಮ್ಮ ಅನಿಸಿಕೆ.

ಈ ದಿಕ್ಕಿನಲ್ಲಿ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಪೋಷಕರನ್ನು ಗಮನದಲ್ಲಿಟ್ಟುಕೊಂಡು ದೇಶದಲ್ಲಿಯೇ ಪ್ರಪ್ರಥಮ ಬಾರಿಗೆ ಒಂದು ವಿಶೇಷ ತರಬೇತಿ ಕಾರ್ಯಕ್ರಮವನ್ನು ರೂಪಿಸಿದೆ. ಈ ತರಬೇತಿ ಕಾರ್ಯಕ್ರಮವು ಅಂಚೆ ತೆರಪಿನ ಶಿಕ್ಷಣದ ಮೂಲಕ ನಡೆಯುವಂತೆ ಯೋಜಿಸಲಾಗಿದ್ದು, ಸಂವಹನ ನ್ಯೂನತೆಯ ಮಕ್ಕಳ ತರಬೇತಿಯಲ್ಲಿ ಒಂದು ಹೊಸ ಆಯಾಮವನ್ನು ಹುಟ್ಟುಹಾಕಿದೆ. ಶ್ರವಣದೋಷ, ಮಾತು-ಕೇಳುವಿಕೆಯ ದೋಷವಿರುವ 'ಪ್ರತಿಯೊಂದು ಮಗುವಿಗೂ ಈ ಆರೈಕೆ/ಸೇವೆ ತಲುಪುವಂತಾಗಬೇಕು. ಅವರೆಲ್ಲರ ನಾಳೆಯ ಬದುಕು ಹಸನಾಗಬೇಕು' ಎಂಬುದೇ ನಮ್ಮ ಕನಸು ಮತ್ತು ಧ್ಯೇಯ.

ಮಾತು-ಕೇಳುವಿಕೆಯ ನ್ಯೂನತೆಯಿರುವ ಮಕ್ಕಳ ತರಬೇತಿಗಾಗಿ ಪೋಷಕರಿಗೆ ರೂಪಿಸಿರುವ ಈ ಕಾರ್ಯಕ್ರಮವು ಹಲವು ಅಂಶಗಳಲ್ಲಿ ಪೋಷಕರಿಗೆ ತರಬೇತಿಯನ್ನು ನೀಡುತ್ತದೆ. ತೊಂದರೆಗಳ ಗುರುತಿಸುವಿಕೆ, ತಡೆಗಟ್ಟುವಿಕೆ, ನಿರ್ವಹಣೆ, ಇಂತಹ ಮಕ್ಕಳ ತರಬೇತಿ, ಸರ್ಕಾರದಿಂದ ಇಂತಹ ಮಕ್ಕಳಿಗೆ ನೀಡಲಾಗಿರುವ ವಿಶೇಷ ಸೌಲಭ್ಯ-ಸವಲತ್ತು-ಹಕ್ಕುಗಳ ಬಗ್ಗೆ ಮಾಹಿತಿ, ಸರ್ಕಾರದ ಕಾರ್ಯಕ್ರಮಗಳು-ಕಾನೂನುಗಳ ಬಗ್ಗೆ ತಿಳುವಳಿಕೆ, ಇತ್ಯಾದಿ. ಅತಿ ಮುಖ್ಯವಾಗಿ, ಮಾತು-ಕೇಳುವಿಕೆಗೆ ಸಂಬಂಧಪಟ್ಟ ನ್ಯೂನತೆಗಳುಳ್ಳ ಮಕ್ಕಳಿಗೆ ಮನೆಯಲ್ಲೇ ನಡೆಸಬಹುದಾದ ತರಬೇತಿ. ಇದಕ್ಕಾಗಿ ನಾಲ್ಕು ಭಾಗಗಳ ಒಂದು ತರಬೇತಿ ಕಾರ್ಯಕ್ರಮವನ್ನು ಸಂಸ್ಥೆಯು ರೂಪಿಸಿದೆ. ಭಾಗ 1, 3, ಮತ್ತು 4 ಎಲ್ಲರಿಗೂ ಕಡ್ಡಾಯ. ಭಾಗ 2 ರಲ್ಲಿ ನಾಲ್ಕು ವಿಷಯಗಳಿದ್ದು, ಪ್ರತಿಯೊಬ್ಬರೂ ಕಡ್ಡಾಯವಾಗಿ ಎರಡು ವಿಷಯಗಳನ್ನು ಅಭ್ಯಸಿಸಬೇಕು. ಈ ತರಬೇತಿಯ ವಿಶೇಷವೆಂದರೆ ಪೋಷಕರಿಗೆ ತಮ್ಮ ಮಕ್ಕಳಲ್ಲಿರುವ ತೊಂದರೆಯ ಬಗ್ಗೆ ಮಾತ್ರ ಅಲ್ಲ, ಉಳಿದ ತೊಂದರೆಗಳ ಬಗ್ಗೆಯೂ ಅಭ್ಯಾಸ ಮಾಡಲು ಭಾಗ 2 ರಲ್ಲಿ ಅವಕಾಶ-ಪ್ರೋತ್ಸಾಹ ನೀಡಲಾಗುವುದು.

ಪ್ರಸ್ತುತ ಅಂಚೆ ತೆರಪಿನ ಶಿಕ್ಷಣದ ಮೂಲಕ ಕನ್ನಡದಲ್ಲಿ ತರಬೇತಿಯನ್ನು ಆರಂಭಿಸುತ್ತಿದ್ದೇವೆ. ಮುಂದೆ ಇಂಗ್ಲೀಷ್, ಹಿಂದಿ, ಮಲಯಾಳಂ ಮತ್ತು ನಮ್ಮ ದೇಶದ ಇತರ ಮುಖ್ಯ ಭಾಷೆಗಳಲ್ಲೂ ಸಹ ತರಬೇತಿಯನ್ನು ಪ್ರಾರಂಭಿಸುತ್ತೇವೆ. ಈ ತರಬೇತಿ ಎಸ್. ಎಸ್.ಎಲ್.ಸಿ (10 ನೇ ತರಗತಿ)ಯಲ್ಲಿ ಉತ್ತೀರ್ಣರಾಗಿರುವ ಎಲ್ಲಾ ಪೋಷಕವರ್ಗದವರಿಗೂ ಲಭ್ಯವಿದೆ.

ಈ ಘಟಕದಲ್ಲಿ ಸಾಮಾನ್ಯ ಮಟ್ಟಕ್ಕಿಂತ ಕಡಿಮೆ ಬುದ್ಧಿಶಕ್ತಿ ಇರುವ ಮಕ್ಕಳ ಬಗೆಗೆ ಮಾಹಿತಿ ಇದೆ. ಬುದ್ಧಿಮಾಂದ್ಯತೆಯ ಬಗ್ಗೆ ಸಾಮಾನ್ಯರಿಗೆ, ಗೃಹಿಣಿಯರಿಗೆ ತಿಳುವಳಿಕೆ ನೀಡುವಲ್ಲಿ ಈ ಪುಸ್ತಕದ ಮಹತ್ವ ಬಹಳ ಇದೆ. ಏಕೆಂದರೆ ಬುದ್ಧಿಮಾಂದ್ಯತೆ ಇರುವ ಮಕ್ಕಳ ಬಗ್ಗೆ ಮಾತು ಬಂದಾಗಲೆಲ್ಲಾ "ಅಯ್ಯೋ, ಈ ಮಕ್ಕಳಿಗೇನು ಮಾಡಲಾಗುತ್ತೆ, ಇವರಿಗೆ ಎಷ್ಟು ಹೇಳಿಕೊಟ್ಟರೂ ಏನೂ ಪ್ರಯೋಜನವಿಲ್ಲ" ಎಂದು ಮೂಗು ಮುರಿಯುವವರೇ ಹೆಚ್ಚು. ಆದರೆ ಇಂತಹ ಮಕ್ಕಳಿಗೂ ಶಿಸ್ತು ಹಾಗೂ ಕ್ರಮಬದ್ಧವಾದ ತರಬೇತಿ ಕೊಟ್ಟು, ಇವರನ್ನೂ ಮುಂದೆ ತರಬಹುದು ಎನ್ನುವ ಅಂಶವನ್ನು ಪೋಷಕವರ್ಗದವರಿಗೆ ಮನದಟ್ಟು ಮಾಡಿಕೊಡುವ ಪ್ರಯತ್ನ ಈ ಪುಸ್ತಕದಲ್ಲಿ ನಡೆದಿದೆ. ತರಬೇತಿಯನ್ನು ಎಷ್ಟು ಶೀಘ್ರದಲ್ಲಿ ಶುರು ಮಾಡುತ್ತೇವೆ ಅನ್ನುವುದರ ಜೊತೆಗೆ ತಾಳ್ಮೆ ಹಾಗೂ ಪಟ್ಟುಬಿಡದೆ ಮುಂದುವರಿಯುವ ಛಲ ಇದಕ್ಕೆ ಅತ್ಯಗತ್ಯ. ಬುದ್ಧಿಮಾಂದ್ಯ ಮಕ್ಕಳ ಗುಣಲಕ್ಷಣಗಳು, ಅಂತಹ ಮಕ್ಕಳು ವಿವಿಧ ವಿಷಯಗಳಲ್ಲಿ ವ್ಯವಹರಿಸುತ್ತಿರುವ ಮಟ್ಟ ಇವುಗಳನ್ನು ಅರಿತುಕೊಂಡು, ಅವರ ಸಾಮರ್ಥ್ಯಕ್ಕೆ ತಕ್ಕ ಹಾಗೆ ಬೋಧನಾಕ್ರಮವನ್ನು ಅಳವಡಿಸಿಕೊಂಡರೆ, ಇಂತಹ ಮಕ್ಕಳೂ ಕೂಡ ತಮ್ಮ ಜೀವನವನ್ನು ಬಹುತೇಕ ತಾವೇ ನಿರ್ವಹಿಸುವಷ್ಟು ಮಟ್ಟಿಗೆ ಬೆಳೆಯಬಲ್ಲರು. ಈ ತಿಳಿವಳಿಕೆ ನಮ್ಮ ಪೋಷಕವರ್ಗದವರಿಗೆ ಅತ್ಯಗತ್ಯ.

ಈ ಸರ್ಟಿಫಿಕೇಟ್ ಪಠ್ಯ ಕ್ರಮ ಮಾತು-ಭಾಷೆ-ಕೇಳುವಿಕೆಯ ತೊಂದರೆಗಳುಳ್ಳ ಮಕ್ಕಳ ತಂದೆ ತಾಯಿಯರಿಗೆ ವಿಶೇಷವಾಗಿ ರೂಪಿಸಲ್ಪಟ್ಟಿದ್ದರೂ ಕೂಡ, ಹೆಚ್ಚಿನ ಸಂಖ್ಯೆಯಲ್ಲಿ ತಾಯಂದಿರು, ನಮ್ಮ ಸೋದರಿಯರು ಇದರ ಪ್ರಯೋಜನ ಪಡೆಯಲಿ ಎಂಬುದು ನಮ್ಮ ಆಸೆ. ಏಕೆಂದರೆ ಒಂದು ಮಗುವಿನ ಶಿಕ್ಷಣದಲ್ಲಿ, ಪಾಲನೆ-ಪೋಷಣೆಯಲ್ಲಿ, ಬೇಕು-ಬೇಡಗಳನ್ನು ಗುರುತಿಸುವಲ್ಲಿ, ತಾಯಿಯರಿಗೆ ಸರಿಸಮನಾಗಿ ಯಾರೂ ನಿಲ್ಲಲಾರರು. ಒಂದು ಸಂಸಾರದಲ್ಲಿ ಓದು ಬರಹ ಬಲ್ಲ ಒಬ್ಬಳು ಹೆಣ್ಣಿದ್ದರೆ, ಇಡೀ ಸಂಸಾರವೇ ಮುಂದೆ ಬರುತ್ತದೆ ಎಂದು ನಾಣ್ಣುಡಿಯೇ ಇದೆಯಲ್ಲ! ಈ ರೀತಿ ತರಬೇತಿ ಪಡೆದ ಒಬ್ಬ ತಾಯಿ, ತನ್ನ ಮಕ್ಕಳಿಗಷ್ಟೇ ಅಲ್ಲ, ತನ್ನ ಸುತ್ತಮುತ್ತಲಿರುವ ಎಲ್ಲಾ ಮಕ್ಕಳಿಗೂ ದಾರಿದೀಪವಾಗಬಲ್ಲಳು.

ಈ ಪಠ್ಯಕ್ರಮವನ್ನು ರೂಪಿಸುವಲ್ಲಿ, ಬರೆಯುವಲ್ಲಿ ನಾವೆಷ್ಟು ಸಫಲರಾಗಿದ್ದೇವೆ ಎನ್ನುವುದರ ಬಗ್ಗೆ ನಿಮ್ಮ ಅನಿಸಿಕೆ ನಮಗೆ ಬಹಳ ಅವಶ್ಯ. ದಯವಿಟ್ಟು ಈ ಪಠ್ಯದ ನಿರೂಪಣೆ, ತಾಂತ್ರಿಕತೆ, ಸರಳತೆ, ಸಂಕೀರ್ಣತೆ ಮತ್ತು ನ್ಯೂನತೆಗಳ ಬಗ್ಗೆ ಬರೆದು ತಿಳಿಸಿ. ನಿಮ್ಮ ಅವಶ್ಯಕತೆಗಳನ್ನು ಪೂರೈಸಲು, ನಿಮ್ಮ ಅನಿಸಿಕೆಗಳನ್ನು ಗೌರವಿಸಲು, ನಿಮ್ಮ ಆಶಯಗಳನ್ನು ಮುಟ್ಟಲು ಮುಂದಿನ ಪ್ರಕಟಣೆಗಳಲ್ಲಿ ಸಾಧ್ಯವಾದಷ್ಟು ಪ್ರಯತ್ನಿಸುತ್ತೇವೆ. ನಮ್ಮ ಸಂಸ್ಥೆಯ ಆಸೆ-ಆಕಾಂಕ್ಷೆಗಳನ್ನು ಸಾಕಾರಗೊಳಿಸಲು ನಿಮ್ಮ ಸಹಕಾರ ಅತ್ಯಗತ್ಯ.

ಈ ತರಬೇತಿಯ ಪಠ್ಯ ವಿಷಯಗಳನ್ನು ರೂಪಿಸುವಲ್ಲಿ ವಿಷಯ ತಜ್ಞರು, ವಿಶೇಷ ತಜ್ಞರು ಹಾಗೂ ಸಂಪಾದಕ ಮಂಡಲಿಯ ಸದಸ್ಯರು ಹಗಲಿರುಳು ಶ್ರಮಿಸಿದ್ದಾರೆ. ಯೋಗ್ಯವಾದ ಪಠ್ಯವನ್ನು ರೂಪಿಸುವಲ್ಲಿ ಇವರೆಲ್ಲರೂ ಯಶಸ್ವಿಯಾಗಿದ್ದಾರೆ ಎಂದು ನನ್ನ ಭಾವನೆ. ಇದಕ್ಕಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಹಾಗೂ ನಮ್ಮ ಸಂಸ್ಥೆಯ ವಿಶೇಷ ಅಭಿನಂದನೆಗಳು.

ಡಾ. ಮ. ಜಯರಾಮ್
ನಿರ್ದೇಶಕರು

# ಪರಿವಿಡಿ

# ಅಧ್ಯಾಯ-1

## ಬುದ್ಧಿಶಕ್ತಿ ಮತ್ತು ಬುದ್ಧಿಶಕ್ತಿಯ ಪರೀಕ್ಷಾ ವಿಧಾನ

'ಬುದ್ಧಿ ಎನ್ನುವುದು ಸಮಯ ಹಾಗೂ ಸಂದರ್ಭಕ್ಕೆ ಅನುಸಾರವಾಗಿ ಬಳಸಲ್ಪಡುವ ಒಂದು ಪರಿಕಲ್ಪನೆ. ಎಂತಹ ಮೇಧಾವಿಗಳೂ ಕೆಲವೊಮ್ಮೆ ಪೆದ್ದರಂತೆ ವರ್ತಿಸಿ ಹಾಸ್ಯಾಸ್ಪದ ಸನ್ನಿವೇಶವನ್ನು ನಿರ್ಮಿಸುತ್ತಾರೆ. ಎಷ್ಟೋ ಜನ ವಿದ್ಯಾವಂತರು ಕ್ಷುಲ್ಲಕ ವಿಷಯಗಳ ಬಗ್ಗೆ ಮೊಂಡುತನದ ಚರ್ಚೆಯಲ್ಲಿ ಕಾಲ ಹರಣ ಮಾಡುತ್ತಾರೆ. ಶಾಲಾ ಹಂತದಲ್ಲಿ ಓದುವ, ಬರೆಯುವ ಕೌಶಲಗಳಲ್ಲಿ ತೀವ್ರವಾದ ತೊಂದರೆಯುಳ್ಳ ಮಕ್ಕಳು ಇರುತ್ತಾರೆ. ಆದರೆ, ಇಂತಹ ಕೆಲವು ಮಕ್ಕಳಿಗೆ ಇತರ ಹಲವಾರು ಚಟುವಟಿಕೆಗಳು ಸಲೀಸು! ಹೀಗೆ, ಬುದ್ಧಿಶಕ್ತಿ ಎನ್ನುವುದು ಒಬ್ಬೊಬ್ಬರಲ್ಲಿ ಒಂದೊಂದು ವಿಧ. ಆಲೋಚನೆ ಮತ್ತು ವರ್ತನೆಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಮತ್ತು ತನ್ನ ಸುತ್ತಲಿನ ಸಮಾಜದೊಡನೆ ಹೊಂದಾಣಿಕೆ ಮಾಡಿಕೊಳ್ಳಲು ಬುದ್ಧಿ ಬೇಕು. ಜೀವಮಾನದಲ್ಲಿ ಹೆಚ್ಚಿನಂಶ ಇವುಗಳನ್ನು ಸಮರ್ಪಕವಾಗಿ ನಿರ್ವಹಿಸಿಕೊಂಡು ಹೋಗುವವರು ಬುದ್ಧಿವಂತರು. ಇವು ಸಾಧ್ಯವೇ ಇಲ್ಲದವರು ಬುದ್ಧಿಮಾಂದ್ಯರು. ಸಾಮರ್ಥ್ಯದಲ್ಲಿ ಪ್ರತಿಯೊಬ್ಬರೂ ಹೇಗೆ ಭಿನ್ನರೋ, ಹಾಗೆಯೇ ಅಸಾಮರ್ಥ್ಯದಲ್ಲೂ ಎಣೆಯಿಲ್ಲದ ಭಿನ್ನತೆಯಿರುತ್ತದೆ. ಆದ್ದರಿಂದಲೇ ಬುದ್ಧಿಮಾಂದ್ಯ ಮಕ್ಕಳ ಸಾಮಾಜಿಕ ಅಭಿವೃದ್ಧಿಗೆ ಮತ್ತು ಪರಿಹಾರದ ಪ್ರಯತ್ನಗಳಿಗೆ ಬೆಂಬಲ ನೀಡುವುದು ನಮ್ಮೆಲ್ಲರ ಹೊಣೆ. ಇಂತಹ ಮಕ್ಕಳೂ ನೆಮ್ಮದಿಯ ಜೀವನ ನಡೆಸುವಂತೆ ಮಾಡುವುದು ನಮ್ಮ ಕರ್ತವ್ಯ.

### ಬುದ್ಧಿ ಶಕ್ತಿ ಎಂದರೇನು?

ಮಂದಗತಿಯಲ್ಲಿ ಕಲಿಯುವ ಮಕ್ಕಳು ಮತ್ತು ಬೌದ್ಧಿಕ ನ್ಯೂನತೆಯಿರುವ ಮಕ್ಕಳನ್ನು ಅರ್ಥ ಮಾಡಿಕೊಳ್ಳಲು, 'ಬುದ್ಧಿಶಕ್ತಿ' ಅಥವ 'ಬುದ್ಧಿಮಟ್ಟದ' ಪರಿಕಲ್ಪನೆಯನ್ನು ತಿಳಿದುಕೊಳ್ಳುವುದು ಅಗತ್ಯ. ತರ್ಕಬದ್ಧವಾಗಿ ಯೋಚಿಸಲು, ಉದ್ದೇಶಪೂರ್ವಕವಾಗಿ ವರ್ತಿಸಲು ಮತ್ತು ತನ್ನ ಸುತ್ತಲಿನ ಸಮಾಜ/ಪರಿಸರದೊಡನೆ ಸಮರ್ಥವಾಗಿ ಹೊಂದಿಕೊಳ್ಳಲು ಒಬ್ಬ ವ್ಯಕ್ತಿಗೆ ಇರುವ ಸಂಪೂರ್ಣ ಸಾಮರ್ಥ್ಯವೇ 'ಬುದ್ಧಿ' ಎನಿಸಿಕೊಳ್ಳುತ್ತದೆ.

ಮನಃಶಾಸ್ತ್ರಜ್ಞರ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಗೂ ಹೆಚ್ಚು ಅಥವಾ ಕಡಿಮೆ ಬುದ್ಧಿಶಕ್ತಿ ಇರುತ್ತದೆ. ಪ್ರತಿಯೊಬ್ಬರ ಬುದ್ಧಿಶಕ್ತಿಯನ್ನೂ ಪ್ರಮಾಣೀಕೃತ ಬುದ್ಧಿಶಕ್ತಿ ಪರೀಕ್ಷೆ (ಸ್ಟ್ಯಾಂಡರ್ಡೈಸ್ಡ್ ಇಂಟೆಲಿಜೆನ್ಸ್ ಟೆಸ್ಟ್)ಯನ್ನು ಉಪಯೋಗಿಸಿ ಅಳೆಯಬಹುದು. ಒಬ್ಬ ವ್ಯಕ್ತಿಯ ಬೌದ್ಧಿಕ ಮತ್ತು ದೈಹಿಕ ವಯಸ್ಸಿನ ಭಾಗಲಬ್ಧದ ಶೇಕಡಾವಾರು ಸಂಖ್ಯೆಯನ್ನು ಬುದ್ಧಿಶಕ್ತಿ ಸೂಚ್ಯಾಂಕ ಅಥವಾ ಐ.ಕ್ಯೂ. ಎನ್ನುತ್ತೇವೆ.

ಕೋಷ್ಟಕ: $\frac{\text{ಬೌದ್ಧಿಕ ವಯಸ್ಸು}}{\text{ದೈಹಿಕ ವಯಸ್ಸು}} \times 100 =$ ಬುದ್ಧಿ ಸೂಚ್ಯಾಂಕ

ಮನ:ಶಾಸ್ತ್ರಜ್ಞರು ಮಗುವಿನ ದೈಹಿಕ ವಯಸ್ಸಿನ ಜೊತೆಗೆ ಬೌದ್ಧಿಕ ವಯಸ್ಸನ್ನೂ ಹೋಲಿಸಿ ನೋಡಿ ಒಂದು ಶೇಕಡಾವಾರು ಸಂಖ್ಯೆಯನ್ನು ಕೊಡುತ್ತಾರೆ. ಇದನ್ನೇ ಐ.ಕ್ಯೂ. ಎನ್ನುವುದು. ಬೌದ್ಧಿಕ ವಯಸ್ಸನ್ನು ಭಾಗಿಸಿ ಬಂದ ಉತ್ತರವನ್ನು ನೂರರಿಂದ ಗುಣಿಸಿ ಆ ಸಂಖ್ಯೆಯನ್ನೇ ಐ.ಕ್ಯೂ. ಎಂದು ಗುರುತಿಸುವುದು. ಕೆಳಗೆ ಕೊಟ್ಟಿರುವ ಉದಾಹರಣೆಗಳನ್ನು ಗಮನಿಸಿ.

ಒಬ್ಬ ಮಗುವಿನ ಬೌದ್ಧಿಕ ವಯಸ್ಸನ್ನು 10 ವರ್ಷ ಎಂದು ಪರೀಕ್ಷೆಯ ಸಹಾಯದಿಂದ ಅಳೆದು, ಆ ಮಗುವಿನ ದೈಹಿಕ ವಯಸ್ಸೂ ಅಷ್ಟೇ ಆಗಿದ್ದರೆ, ಆ ಮಗುವಿಗೆ ಅವನ ವಯಸ್ಸಿಗನುಗುಣವಾದ ಬುದ್ಧಿ ಇದೆ ಎಂದು ನಾವು ನಿರ್ಣಯಿಸುತ್ತೇವೆ. ಇದನ್ನು ನಾವು ಅವನಿಗೆ ಬುದ್ಧಿಶಕ್ತಿ ಸೂಚ್ಯಾಂಕ 100 ಇದೆ ಎನ್ನುತ್ತೇವೆ. (ಇಂಟಲಿಜೆನ್ಸ್ ಕೋಷಿಯೆಂಟ್ ಐ.ಕ್ಯೂ.) ಇದು ಒಂದು ಪ್ರಮಾಣಬದ್ಧ ಸರಾಸರಿ.

ಉದಾ:1 ಮಗುವಿನ ಬೌದ್ಧಿಕ ವಯಸ್ಸು : 10 ವರ್ಷ
ಮಗುವಿನ ದೈಹಿಕ ವಯಸ್ಸು : 10 ವರ್ಷ

$$\frac{\text{10 ವರ್ಷ}}{\text{10 ವರ್ಷ}} \times 100 = \text{ಬುದ್ಧಿಶಕ್ತಿ ಸೂಚ್ಯಾಂಕ } 100$$

ಉದಾ:2 ಮಗುವಿನ ಬೌದ್ಧಿಕ ವಯಸ್ಸು : 11 ವರ್ಷ
ಮಗುವಿನ ದೈಹಿಕ ವಯಸ್ಸು : 10 ವರ್ಷ

$$\frac{\text{11 ವರ್ಷ}}{\text{10 ವರ್ಷ}} \times 100 = \text{ಬುದ್ಧಿಶಕ್ತಿ ಸೂಚ್ಯಾಂಕ } 110$$

ಉದಾ:3 ಮಗುವಿನ ಬೌದ್ಧಿಕ ವಯಸ್ಸು : 9 ವರ್ಷ
ಮಗುವಿನ ದೈಹಿಕ ವಯಸ್ಸು : 10 ವರ್ಷ: ಹೀಗಾಗಿ

$$\frac{\text{9 ವರ್ಷ}}{\text{10 ವರ್ಷ}} \times 100 = \text{ಬುದ್ಧಿಶಕ್ತಿ ಸೂಚ್ಯಾಂಕ } 90$$

## ಬುದ್ಧಿಶಕ್ತಿಯ ಪರೀಕ್ಷೆಯಲ್ಲಿ ಏನಿರುತ್ತದೆ?



ವಿವಿಧ ವಯಸ್ಸಿನ ವ್ಯಕ್ತಿಗಳಿಗೆ ಸರಿಹೊಂದುವಂತಹ ಆಸಕ್ತಿದಾಯಕ ಆಟಗಳು, ಸಮಸ್ಯೆಗಳು, ಚಟುವಟಿಕೆಗಳು ಮುಂತಾದವು ಬುದ್ಧಿಶಕ್ತಿಯ ಪರೀಕ್ಷೆಯಲ್ಲಿ ಇರುತ್ತವೆ. ಒಬ್ಬ ವ್ಯಕ್ತಿಯ ವಯಸ್ಸಿಗೆ ಸರಿಹೊಂದುವ ಶೇಕಡಾ 50ರಷ್ಟು ಅಂತಹವುಗಳನ್ನು ಬಗೆಹರಿಸಿದರೆ, ಸುಮಾರಾಗಿ ಅವನಿಗೆ ಆ ವಯಸ್ಸಿಗೆ ತಕ್ಕುದಾದ ಬೌದ್ಧಿಕ ವಯಸ್ಸು ಇದೆ ಎಂದು ಪರಿಗಣಿಸಬಹುದು.

ರೇಖಾಗಣಿತದ ಆಕೃತಿಗಳನ್ನು ನೋಡಿ ಬರೆಯುವ ಸಾಮರ್ಥ್ಯವನ್ನು ಉದಾಹರಣೆಗಾಗಿ ತೆಗೆದುಕೊಳ್ಳಿ. ಮಕ್ಕಳ ಬೆಳವಣಿಗೆಯ ಬಗೆಗಿನ ಸಂಶೋಧನೆಗಳು 3 ವರ್ಷಕ್ಕೆ ವೃತ್ತವನ್ನೂ 4 ವರ್ಷಕ್ಕೆ ಚೌಕವನ್ನು 5 ವರ್ಷಕ್ಕೆ ತ್ರಿಕೋನವನ್ನೂ 7 ವರ್ಷಕ್ಕೆ ವಜ್ರಾಕೃತಿಯನ್ನೂ, ನೋಡಿ ಬರೆಯಬಹುದೆಂದು ತೋರಿಸಿದೆ. ಆದ್ದರಿಂದ, ಆ 4 ವರ್ಷದ ಮಗುವು ವಜ್ರಾಕಾರವನ್ನು ಬರೆಯಲಾರದು ಎಂಬುದು ಖಚಿತ. ಈ ರೀತಿಯ ಸಂಶೋಧನೆಗಳ ಆಧಾರದ ಮೇಲೆ ಮನಃಶಾಸ್ತ್ರಜ್ಞರು ಮಕ್ಕಳ ವಿವಿಧ ಬೌದ್ಧಿಕ ವಯಸ್ಸನ್ನು ಅಳೆಯುವ ಬುದ್ಧಿಶಕ್ತಿ ಪರೀಕ್ಷಾವಿಧಾನವನ್ನು ತಯಾರಿಸಿದ್ದಾರೆ, ಕೆಲವೇ ವಿಷಯಗಳನ್ನು ಗಮನಿಸಿ ಅಥವಾ ಒಂದೇ ಪರೀಕ್ಷೆಯ ಆಧಾರದಲ್ಲಿ ಮನಃಶಾಸ್ತ್ರಜ್ಞರು ಬುದ್ಧಿಶಕ್ತಿ ಸೂಚ್ಯಾಂಕವನ್ನು ನಿರ್ಧರಿಸುವುದಿಲ್ಲ.

## ಬುದ್ಧಿ ಶಕ್ತಿಯ ಮಟ್ಟವನ್ನು ಅಳೆಯುವ ಸರಿಯಾದ ಮಾರ್ಗ

ಒಬ್ಬ ವ್ಯಕ್ತಿಯ ಬುದ್ಧಿಶಕ್ತಿಯ ಮಟ್ಟವನ್ನು ಅಳೆಯಲು ಸರಿಯಾದ ಮಾರ್ಗ ಎಂದರೆ, ಆ ವ್ಯಕ್ತಿಯ ವಯಸ್ಸು ಮತ್ತು ಬೆಳೆದ ಪರಿಸರಕ್ಕೆ ತಕ್ಕುದಾದ ಪರೀಕ್ಷೆಯೊಂದನ್ನು ಮನಃಶಾಸ್ತ್ರಜ್ಞರು ಆತನಿಗೆ ನೀಡಿ ಪರೀಕ್ಷಿಸುವುದು. ಅಂತಹ ಪರೀಕ್ಷೆ ಎಲ್ಲರಿಗೂ ಸಿಗುವುದಿಲ್ಲ. ಮಗುವಿನ ಬೌದ್ಧಿಕ ವಯಸ್ಸನ್ನು ಅವನ ದಿನನಿತ್ಯದ ವರ್ತನೆ ಹಾಗೂ ಸಾಮಾಜಿಕ ಚಟುವಟಿಕೆಗಳ ಆಧಾರದ ಮೇಲೆ ಅಂದಾಜು ಮಾಡಬಹುದು. ಅಂತಹ ಅಂದಾಜು ಕೆಲವು ಸಂದರ್ಭಗಳಲ್ಲಿ ತಪ್ಪಾಗಲೂ ಬಹುದು. ಆದ್ದರಿಂದ ಕೇವಲ ಒಂದೇ ಪರೀಕ್ಷೆಯ ಆಧಾರದಲ್ಲಿ ಮಗುವಿನ ಬೌದ್ಧಿಕ ವಯಸ್ಸನ್ನು ನಿರ್ಣಯಿಸುವುದಿಲ್ಲ. ಒಂದಕ್ಕಿಂತ ಹೆಚ್ಚಿನ ರೀತಿಯ ಪರೀಕ್ಷೆಗಳನ್ನು ನೀಡಿ ಮಗುವಿನ ಬೌದ್ಧಿಕ ವಯಸ್ಸನ್ನು ಅಂದಾಜು ಮಾಡುತ್ತಾರೆ.

## ಬುದ್ಧಿಮಾಂದ್ಯ ಮಕ್ಕಳು ಎಂದರೆ ಯಾರು

ಐ.ಕ್ಯೂ. 70ಕ್ಕಿಂತ ಕಡಿಮೆಯಿದ್ದು, ಜೊತೆಗೆ ಕಲಿತ ವರ್ತನೆಯಲ್ಲೂ ನ್ಯೂನತೆ ಇದ್ದರೆ ಅಂತಹ ಮಕ್ಕಳನ್ನು ಬುದ್ಧಿ ಮಾಂದ್ಯರೆಂದು ಹೇಳಬಹುದು. ಕಲಿತ ವರ್ತನೆ ಎಂದರೆ –

i) ದಿನ ನಿತ್ಯದ ಜೀವನ ಹಾಗೂ ಸಾಮಾಜಿಕ ಪರಿಸರದಲ್ಲಿ ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಳ್ಳುವುದು.

ii) ಸಾಮಾನ್ಯವಾಗಿ ಒಬ್ಬ ವ್ಯಕ್ತಿಯು ತನ್ನ ವಯಸ್ಸು ಮತ್ತು, ಸಾಮಾಜಿಕ/ಸಾಂಸ್ಕೃತಿಕ ಗುಂಪಿನ ಜೊತೆಗೆ ತನ್ನ ವೈಯಕ್ತಿಕ ಸ್ವಾತಂತ್ರ್ಯ ಮತ್ತು ಸಾಮಾಜಿಕ ಜವಾಬ್ದಾರಿಗಳನ್ನು ನಿಭಾಯಿಸುವ ರೀತಿ.

**ಸಾಮಾಜಿಕ ಕುಶಲತೆ**

ಇದು ವ್ಯಕ್ತಿಯ ವಯಸ್ಸಿಗನುಗುಣವಾಗಿ ಬದಲಾಗುತ್ತದೆ.

ಅ) ಚಿಕ್ಕ ಮಕ್ಕಳಿಗೆ ಅಗತ್ಯವಿರುವ ಕುಶಲತೆಗಳು

1) ಸಂವೇದನಾ ಗತಿ ಕುಶಲತೆ

2) ಮಾತಿನ ಕುಶಲತೆ

3) ಸ್ವ-ಸಹಾಯ ಕುಶಲತೆ ಮತ್ತು

4) ಸಾಮಾಜಿಕ ನಡೆ-ನುಡಿ

ಆ) ಬಾಲ್ಯಾವಸ್ಥೆ ಮತ್ತು ತಾರುಣ್ಯದಲ್ಲಿ ಅಗತ್ಯವಿರುವ ಕುಶಲತೆಗಳು

1) ಶೈಕ್ಷಣಿಕ ಕುಶಲತೆಗಳನ್ನು ದಿನನಿತ್ಯದ ಜೀವನಕ್ಕೆ ಅಳವಡಿಸಿಕೊಳ್ಳುವುದು ಮತ್ತು

2) ಸಾಮಾಜಿಕ ಸಂದರ್ಭಗಳಲ್ಲಿ ನಿರ್ಣಯ ತೆಗೆದಕೊಳ್ಳುವುದು.

ಇ) ತಾರುಣ್ಯದ ಕೊನೆಯ ಹಂತ ಮತ್ತು ಪ್ರೌಢಾವಸ್ಥೆಯಲ್ಲಿ ಅಗತ್ಯವಿರುವ ಕೌಶಲಗಳು

1) ದಿನ ನಿತ್ಯದ ಜೀವನದಲ್ಲಿ ಬರುವ ವೃತ್ತಿಪರ ಜವಾಬ್ದಾರಿಯನ್ನು ನಿರ್ವಹಿಸುವುದು ಮತ್ತು

2) ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವುದು.

ಮೇಲಿನ ಅಪೇಕ್ಷಣೀಯ ವರ್ತನೆಗಳನ್ನು ನಿಭಾಯಿಸಲಾಗದ ಈ ರೀತಿಯ ಮಕ್ಕಳ ಅಭಿವೃದ್ಧಿಗೆ ಪೂರಕವಾದ ಶೈಕ್ಷಣಿಕ ನಿರೀಕ್ಷೆಗಳನ್ನು ಮುಂದಿನ ಹಂತದಲ್ಲಿ ಅಧ್ಯಯನ ಮಾಡೋಣ.

## ಅಧ್ಯಾಯ -2

# ಬುದ್ಧಿಶಕ್ತಿಯ ವಿವಿಧ ಮಟ್ಟಗಳು

ಬುದ್ಧಿ ಮಾಂದ್ಯತೆಯು ಅನೇಕ ಮಟ್ಟಗಳಲ್ಲಿ ಕಂಡು ಬರುತ್ತದೆ. ಕೆಲವು ಮಕ್ಕಳಲ್ಲಿ ಕಂಡು ಬರುವ ಬುದ್ಧಿ ಮಾಂದ್ಯತೆಯು ಅತ್ಯಲ್ಪ ಪ್ರಮಾಣದಲ್ಲಿ ಮಾತ್ರವಿದ್ದು, ನಿಧಾನಗತಿಯಲ್ಲಿ ಕಲಿಯುವವರು ಎಂದೆನಿಸಿಕೊಳ್ಳುತ್ತಾರೆ. ಇವರ ಬುದ್ಧಿವಂತಿಕೆಯು ಸಮವಯಸ್ಕರ ಸರಾಸರಿ ಬುದ್ಧಿ ಮಟ್ಟದ ಶೇ.75 ರಿಂದ 90 ರವರೆಗೆ ಇರುತ್ತದೆ. ಸರಾಸರಿ ಬುದ್ಧಿ ಮಟ್ಟವಿರುವ ಮಕ್ಕಳು ಕಲಿಯುವ ಬಹುತೇಕ ವಿಷಯಗಳನ್ನು ಇವರು ಕಲಿಯುತ್ತಾರಾದರೂ ಅವುಗಳನ್ನು ಕಲಿಯಲು ತೆಗೆದುಕೊಳ್ಳುವ ಕಾಲಾವಧಿ ಹೆಚ್ಚಾಗಿರುತ್ತದೆ. ಅಷ್ಟೇ ಅಲ್ಲ, ವಿಷಯವನ್ನು ಕಲಿಯಲು ನೀಡಬೇಕಾಗುವ ಅಭ್ಯಾಸದ ಪ್ರಮಾಣವೂ ಇವರಿಗೆ ಅಧಿಕವಾಗಿ ಬೇಕಾಗುತ್ತದೆ. ಅಮೂರ್ತ ವಿಷಯಗಳನ್ನು ಕಲಿಯಲು ಬಹಳ ಕಷ್ಟ ಪಡುತ್ತಾರೆ. ಇವರಿಗಿಂತ ಸ್ವಲ್ಪ ಹೆಚ್ಚಿನ ಮಟ್ಟದಲ್ಲಿ ಬುದ್ಧಮಾಂದ್ಯತೆಯುಳ್ಳ ಮಕ್ಕಳನ್ನು ಶೈಕ್ಷಣಿಕ ಸಾಧ್ಯತಾ ಮಟ್ಟದ ಬುದ್ಧಿಮಾಂದ್ಯತೆಯುಳ್ಳವರು ಎಂದೂ ಕರೆಯುತ್ತೇವೆ. ಇದರ ಅರ್ಥ ಇವರ ಬುದ್ಧಿಮಟ್ಟವು ಸಮವಯಸ್ಕರ ಸರಾಸರಿ ಬುದ್ಧಿವಂತಿಕೆಯ ಅರ್ಧದಿಂದ ಮುಕ್ಕಾಲರಷ್ಟು ಇರುತ್ತದೆ. ಹೀಗಾಗಿ ಇವರು ಬಹಳಷ್ಟು ಕಾರ್ಯಚಟುವಟಿಕೆಗಳಲ್ಲಿ ಗಣನೀಯ ಮಟ್ಟದಲ್ಲಿ ಹಿಂದುಳಿದಿರುತ್ತಾರೆ. ಸರಾಸರಿ ಬುದ್ಧಿಮಟ್ಟವುಳ್ಳ ಸಮವಯಸ್ಕರು ಸರಾಗವಾಗಿ ನಿರ್ವಹಿಸುವ ಅನೇಕ ಕಾರ್ಯಗಳು ಇವರಿಗೆ ಜಟಿಲವಾಗುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ ಶೈಕ್ಷಣಿಕ ಕ್ಷೇತ್ರದಲ್ಲಿ ಹೆಚ್ಚಿನ ತೊಂದರೆಯನ್ನು ಅನುಭವಿಸುತ್ತಾರೆ. ಇವರಿಗೆ ಶಾಲಾ ವಿದ್ಯಾಭ್ಯಾಸ 3-6 ತರಗತಿಯವರೆಗೆ ಮಾತ್ರ ಸಾಧ್ಯ. ಇಷ್ಟೆಲ್ಲಾ ಸಮಸ್ಯೆಯಿದ್ದರೂ ಸರಿಯಾದ ಕ್ರಮದಲ್ಲಿ ಕಲಿಸಿದರೆ ಓದು, ಬರಹ, ಅಂಕಗಣಿತ ಇಂತಹ ಕೌಶಲಗಳನ್ನು ಕಲಿಯಲು ಮತ್ತು ಕಲಿತದನ್ನು ನಿತ್ಯ ಜೀವನದಲ್ಲಿ ಉಪಯೋಗಿಸಿಕೊಳ್ಳಲು ಸಮರ್ಥರಾಗುತ್ತಾರೆ:



ಮೇಲಿನ ಈ ಎರಡು ಮಟ್ಟದ ಬುದ್ಧಿಮಾಂದ್ಯತೆಯುಳ್ಳ ಮಕ್ಕಳ ಶೈಕ್ಷಣಿಕ ಪ್ರಗತಿಗೆ ನಮ್ಮ ಕೈಲಾದ ಮಟ್ಟಿಗೆ ಸಹಾಯ ಮಾಡಬಹುದು. ಅವರ ಸಾಮಾನ್ಯ ಗುಣಲಕ್ಷಣಗಳು ಈ ಕೆಳಗಿನಂತಿರುತ್ತವೆ.

1. ವೃತ್ತ, ಚೌಕ ಇಂತಹ ಸಾಮಾನ್ಯ ಆಕಾರಗಳನ್ನು ಗುರುತಿಸಲು ಕಷ್ಟ ಪಡುತ್ತಾರೆ.
2. ಪಾಠ-ಪ್ರವಚನಗಳಲ್ಲಿ 2-3 ವರ್ಷಗಳಷ್ಟು ಹಿಂದುಳಿದಿರುತ್ತಾರೆ. ಗ್ರಹಣ ಶಕ್ತಿ, ಜ್ಞಾಪಕಶಕ್ತಿ ಎರಡೂ ಕಡಿಮೆ.
3. ದೈಹಿಕ ಚಟುವಟಿಕೆಗಳಲ್ಲಿ ನಿಧಾನ ಮತ್ತು ನಿರುತ್ಸಾಹ ತೋರುತ್ತಾರೆ.
4. ಬಣ್ಣ ತುಂಬುವುದು, ಚಿತ್ರ ಬರೆಯುವುದಕ್ಕೆ ಕೂಡಾ ಕಷ್ಟಪಡುತ್ತಾರೆ.
5. ಬೌದ್ಧಿಕ ಚಟುವಟಿಕೆಯಲ್ಲಿ ಪಾಲುಗೊಳ್ಳುವುದಿಲ್ಲ. ಪಾಲುಗೊಂಡರೂ ಕೆಲಸದ ಕ್ಲಿಷ್ಟತೆ ಹೆಚ್ಚಿದಂತೆಲ್ಲಾ ಗಮನ ಕೇಂದ್ರೀಕರಣ ಸಾಧ್ಯವಾಗುವುದಿಲ್ಲ.
6. ವಿಷಯವನ್ನು ತಿಳಿದುಕೊಳ್ಳಲು ಇತರರಿಗಿಂತ ಹೆಚ್ಚು ಸಮಯವನ್ನು ಇವರು ತೆಗೆದುಕೊಳ್ಳುತ್ತಾರೆ ಮತ್ತು ಹೆಚ್ಚು ಪುನರಾವರ್ತನೆ ಬೇಕಾಗುತ್ತದೆ.
7. ಸುತ್ತಮುತ್ತಲಿನ ಯಾವುದೇ ಚಿಕ್ಕ ಗಲಾಟೆಯೂ ಮಗುವಿನ ಗಮನವನ್ನು ಬೇರೆಡೆಗೆ ಸೆಳೆಯುತ್ತದೆ.
8. ಮಗುವು ಗುಂಪು ಚಟುವಟಿಕೆಯಲ್ಲಿ ಹೆಚ್ಚು ಸಮಯ ಕಳೆಯಲು ಇಷ್ಟ ಪಡುವುದಿಲ್ಲ.
9. ಸಮ ವಯಸ್ಕರು ಆಡುವಂತಹ ಆಟಗಳಲ್ಲಿ ಭಾಗವಹಿಸಲು ಆಗುವುದಿಲ್ಲ.
10. ತಮಗಿಂತ ಕಡಿಮೆ ವಯಸ್ಸಿನ ಮಕ್ಕಳೊಡನೆ ಇರಲು ಇವರು ಇಷ್ಟಪಡುತ್ತಾರೆ.
11. ಸಾಮೂಹಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ತುಂಬಾ ನಾಚಿಕೆಪಡುತ್ತಾರೆ.
12. ಹೆಚ್ಚು ಸಮಯ ಹಟಮಾರಿತನ, ಹೊಡೆದಾಡುವುದು, ಕಿರುಚಿಕೊಳ್ಳುವುದು- ಇತ್ಯಾದಿ ಅಪ್ರಿಯ ಕೃತ್ಯಗಳಲ್ಲಿ ತೊಡಗಿರುತ್ತಾರೆ.





## ಬುದ್ಧಿಶಕ್ತಿಯ ವಿವಿಧ ಮಟ್ಟಗಳೇನು?

ಪ್ರತಿಯೊಬ್ಬ ವ್ಯಕ್ತಿಯೂ ಒಬ್ಬರಿಂದೊಬ್ಬರಿಗೆ ಭಿನ್ನವಾಗಿರುತ್ತಾನೆ. ಅದು ಬುದ್ಧಿಶಕ್ತಿಗೂ ಕೂಡ ಅನ್ವಯವಾಗುತ್ತದೆ. ಆದ್ದರಿಂದ ಅತ್ಯುನ್ನತ ಮಟ್ಟದ ಬುದ್ಧಿವಂತ (ಐ.ಕ್ಯೂ.. 130) ನಿಂದ ಹಿಡಿದು ತೀವ್ರತರ ಬುದ್ಧಿಮಾಂದ್ಯ (ಐ.ಕ್ಯೂ.20) ವರೆಗೆ ಒಬ್ಬ ವ್ಯಕ್ತಿಯ ಬುದ್ಧಿಶಕ್ತಿಯು ಹರಡಿರಬಹುದು. ಬುದ್ಧಿಶಕ್ತಿಯ ವಿವಿಧ ಮಟ್ಟಗಳನ್ನು ತಿಳಿಯುವ ಸಲುವಾಗಿ ಈ ಕೆಳಕಂಡ ಪಟ್ಟಿಯನ್ನು ನೆನಪಿನಲ್ಲಿ ಇಟ್ಟುಕೊಳ್ಳುವುದು ಸೂಕ್ತ.

## ಬುದ್ಧಿ ಶಕ್ತಿಯ ವಿವಿಧ ಮಟ್ಟಗಳು

| ಕ್ರಸಂ | ಐ.ಕ್ಯೂ (ಬುದ್ಧಿಮಟ್ಟದ ಸೂಚ್ಯಾಂಕ) | ವಿವರಣೆ |
|---|---|---|
| 1) | 0-20 | ಗರಿಷ್ಠ ಮಟ್ಟದ ಬುದ್ಧಿಮಾಂದ್ಯತೆ (ಪ್ರೊಫೌಂಡ್ ಮೆಂಟಲ್ ರಿಟಾರ್ಡೇಶನ್) |
| 2) | 20-35 | ತೀವ್ರತರ ಬುದ್ಧಿಮಾಂದ್ಯತೆ (ಸಿವಿಯರ್ ಮೆಂಟಲ್ ರಿಟಾರ್ಡೇಶನ್) |
| 3) | 35-50 | ಗಣನೀಯ ಬುದ್ಧಿಮಾಂದ್ಯತೆ (ಮಾಡರೇಟ್ ಮೆಂಟಲ್ ರಿಟಾರ್ಡೇಶನ್) |
| 4) | 50-70 | ಲಘು ಬುದ್ಧಿಮಾಂದ್ಯತೆ (ಮೈಲ್ಡ್ ಮೆಂಟಲ್ ರಿಟಾರ್ಡೇಶನ್) |
| 5) | 70-90 | ಸಾಮಾನ್ಯ ಮಟ್ಟಕ್ಕಿಂತ ಸ್ವಲ್ಪ ಕಡಿಮೆ ಬುದ್ಧಿಶಕ್ತಿ ಅಥವಾ ಮಂದಗತಿಯಲ್ಲಿ ಕಲಿಯುವವರು |
| 6) | 90-109 | ಸಾಮಾನ್ಯ ಮಟ್ಟದ ಕಲಿಕಾ ಸಾಮರ್ಥ್ಯ ಉಳ್ಳವರು |
| 7) | 110-119 | ಉತ್ತಮ ಮಟ್ಟದ ಕಲಿಕಾ ಸಾಮರ್ಥ್ಯ ಉಳ್ಳವರು |
| 8) | 120-129 | ಅತಿ ಉತ್ತಮ ಮಟ್ಟದ ಕಲಿಕಾ ಸಾಮರ್ಥ್ಯ ಉಳ್ಳವರು |
| 9) | 130-ಕ್ಕಿಂತ ಹೆಚ್ಚು | ಅತೀ ಶ್ರೇಷ್ಠ ಮಟ್ಟದ ಕಲಿಕಾ ಸಾಮರ್ಥ್ಯ ಉಳ್ಳವರು |

ಈ ಮೇಲಿನ ವಿವರಣೆಯ ಆಧಾರದಲ್ಲಿ ಅತ್ಯುನ್ನತ ಮಟ್ಟದ ಬುದ್ಧಿವಂತ 10 ವರ್ಷದ ಬಾಲಕ ಬೌದ್ಧಿಕವಾಗಿ 13 ವರ್ಷದವನಂತಿರಬಹುದು; ಇಲ್ಲಾ ತೀವ್ರತರ ಬುದ್ಧಿಮಾಂದ್ಯ ಬಾಲಕ 2 ವರ್ಷದ ಮಗುವಿನಂತಿರಬಹುದು.

ಯಾವುದೇ ಜನಸಂಖ್ಯೆ, ರಾಷ್ಟ್ರ ಅಥವಾ ಸಮಾಜದ ಗುಂಪನ್ನು ತೆಗೆದುಕೊಂಡರೆ ಐಕ್ಯೂ ಸರಾಸರಿ ಮಟ್ಟದಲ್ಲೇ ಇರುತ್ತದೆ ಎಂದು ಮನ:ಶಾಸ್ತ್ರಜ್ಞರು ಕಂಡು ಹಿಡಿದಿದ್ದಾರೆ. ಸರಾಸರಿ ಮಟ್ಟ 90-100 ಬುದ್ಧಿಶಕ್ತಿಯ ವೈಪರೀತ್ಯಗಳಲ್ಲಿ ಅತೀ ಕಡಿಮೆ ಹಾಗೂ ಅತ್ಯುನ್ನತ ಮಟ್ಟಕ್ಕೆ ಹೋಗುತ್ತಿದ್ದಂತೆಯೇ ಜನರ ಸಂಖ್ಯೆ ಕಡಿಮೆಯಾಗುತ್ತದೆ. ಆದ್ದರಿಂದ, ಯಾವುದೇ ಗುಂಪಿನವರನ್ನು ತೆಗೆದುಕೊಂಡರೂ, ಅತ್ಯುನ್ನತ ಮಟ್ಟದ ಬುದ್ಧಿವಂತರು ಹಾಗೂ ತೀವ್ರತರದ ಬುದ್ಧಿಮಾಂದ್ಯರು ಬಹಳ ಕಡಿಮೆ ಸಂಖ್ಯೆಯಲ್ಲಿ ಇರುತ್ತಾರೆ.

ಈ ನೀತಿಯನ್ನು/ತತ್ತ್ವವನ್ನು ಇತ್ತೀಚೆಗೆ ಕೆಲವು ಮನಃಶಾಸ್ತ್ರಜ್ಞರು ಪ್ರಶ್ನಿಸುತ್ತಿದ್ದಾರೆ. ಅವರ ಚರ್ಚೆಯ ಪ್ರಕಾರ ಸುಮಾರು ನೂರು ವರ್ಷಕ್ಕೂ ಹಿಂದೆ ತೀವ್ರ ತರಹದ ಬುದ್ಧಿ ಮಾಂದ್ಯರು ಕಡಿಮೆಯಿದ್ದಿರಬಹುದು. ಏಕೆಂದರೆ, ಇಂತಹವರು ಹುಟ್ಟುತ್ತಲೇ ಇರುತ್ತಿದ್ದ ದೋಷಗಳಿಂದಾಗಿ ಅವರು ಉಳಿಯುವ ಸಾಧ್ಯತೆಗಳು ಕಡಿಮೆ ಇದ್ದವು. ಆದರೆ ಇತ್ತೀಚೆಗೆ ಪರಿಸ್ಥಿತಿ ತುಂಬಾ ಸುಧಾರಿಸಿದೆ. ವೈದ್ಯಕೀಯ ಕ್ಷೇತ್ರದಲ್ಲಿನ ಕ್ರಾಂತಿಯಿಂದಾಗಿ ಮಗುವು ಹುಟ್ಟಿದ ಕೂಡಲೇ ಸಾಯುವುದು ತೀರಾ ವಿರಳ. ದೋಷಪೂರಿತವಾಗಿ ಹುಟ್ಟಿದ ಮಗುವು ಬದುಕುತ್ತಿದೆ. ಆದ್ದರಿಂದ ಈಗ ಜೀವನಪೂರ್ತಿ ದುರ್ಬಲ/ನಿತ್ರಾಣ ಸ್ಥಿತಿಯಲ್ಲಿರುವ ಮಕ್ಕಳ ಸಂಖ್ಯೆ ಹೆಚ್ಚಾಗಿದೆ. ಅಲ್ಲದೆ ನಮ್ಮ ದೇಶದಲ್ಲಿ ಹೆಚ್ಚಿನ ಸಂಖ್ಯೆಯ ತೀವ್ರ ತರಹದ ಬುದ್ಧಿಮಾಂದ್ಯ ಮಕ್ಕಳು ಸಾಮಾಜಿಕ, ಆರ್ಥಿಕ ಕಾರಣಗಳಿಂದ ತಜ್ಞರ ಗಮನಕ್ಕೆ ಬರುವುದಿಲ್ಲ ಅದೇನೇ ಇರಲಿ ಬುದ್ಧಿಶಕ್ತಿಯ ವಿವಿಧ ಮಟ್ಟಗಳ ಬಗ್ಗೆ ತಿಳಿದಿದ್ದೇವೆ. ಬುದ್ಧಿಶಕ್ತಿ ಎಂದರೇನು? ಅದನ್ನು ಅಳೆಯುವ ವಿಧಾನ ಹೇಗೆ? ಬುದ್ಧಿ ಶಕ್ತಿಯ ವಿವಿಧ ಮಟ್ಟಗಳೇನು? ಎಂಬುದನ್ನು ತಿಳಿದ ನಂತರ ಮಂದಗತಿಯಲ್ಲಿ ಕಲಿಯುವ ಮಕ್ಕಳ ಮತ್ತು ಬೌದ್ಧಿಕ ನ್ಯೂನತೆಯ (ಬುದ್ಧಿಮಾಂದ್ಯ) ಮಕ್ಕಳ ಬಗ್ಗೆ ತಿಳಿಯುವ ಹಂತಕ್ಕೆ ಮುಟ್ಟಿದ್ದೇವೆ. ಮಂದಗತಿಯ ಕಲಿಕೆಯ ಮಕ್ಕಳು ಯಾರು? ಮತ್ತು ಬೌದ್ಧಿಕ ನ್ಯೂನತೆಯ (ಬುದ್ಧಿಮಾಂದ್ಯ) ಮಕ್ಕಳು ಎಂದರೆ ಹೇಗಿರುತ್ತಾರೆ? ಈ ವಿಷಯದ ಕುರಿತು ಮುಂದಿನ ಹಂತದಲ್ಲಿ ಚರ್ಚಿಸೋಣ.

ಅಧ್ಯಾಯ-3

# ಬುದ್ಧಿಮಾಂದ್ಯ ಮಕ್ಕಳ ಶೈಕ್ಷಣಿಕ ನಿರೀಕ್ಷೆಗಳು

## ಬುದ್ಧಿಶಕ್ತಿಯ ವಿವಿಧ ಮಟ್ಟಗಳಲ್ಲಿ ಅವರ ಶೈಕ್ಷಣಿಕ ನಿರೀಕ್ಷೆಗಳೇನು?



ಮಾನವನ ಜೀವನವನ್ನು ರೂಪಿಸುವಲ್ಲಿ ಬುದ್ಧಿಶಕ್ತಿಯ ಪಾತ್ರ ಹಿರಿದು. ಕಲಿಕೆ ಹಾಗು ಶಿಕ್ಷಣದಲ್ಲಿ ಸಾಧನೆಗೆ ಬುದ್ಧಿಶಕ್ತಿಯು ಬೇಕೇ ಬೇಕು ಎಂಬುದಕ್ಕೆ ಎರಡು ಮಾತಿಲ್ಲ. ಶೈಕ್ಷಣಿಕ ಸಾಧನೆಗೆ ಬುದ್ಧಿ ಶಕ್ತಿ ಅತ್ಯಗತ್ಯವಾದರೂ, ಶಿಕ್ಷಣದಲ್ಲಿ ಯಶಸ್ಸಿಗೆ ಅದೊಂದೇ ಸಾಧನವಲ್ಲ.

ಆದರೂ ಐ.ಕ್ಯೂ. ಸೂಚ್ಯಾಂಕದ ಆಧಾರದಲ್ಲಿ ಒಬ್ಬ ಮಗುವಿನಿಂದ ನಾವು ಏನನ್ನು/ಎಷ್ಟನ್ನು ನಿರೀಕ್ಷಿಸಬಹುದು ಎಂದು ತಿಳಿದಿರುವುದು ಒಳಿತು. ಕೆಳಗೆ ಕೊಟ್ಟಿರುವ ಪಟ್ಟಿಯಲ್ಲಿ ಗರಿಷ್ಟ ಬೌದ್ಧಿಕ ವಯಸ್ಸು ಹಾಗೂ ನಿರೀಕ್ಷಿತ ಶೈಕ್ಷಣಿಕ ಮಟ್ಟವನ್ನು ಐ.ಕ್ಯೂ.ಗೆ ಅನುಗುಣವಾಗಿ ಕೊಡಲಾಗಿದೆ.

| ಕ್ರಮ ಸಂಖ್ಯೆ | ಐ.ಕ್ಯೂ (ಬುದ್ಧಿಶಕ್ತಿ ಸೂಚ್ಯಾಂಕ) | ವಿವರಣೆ | ನಿರೀಕ್ಷಿತ ಶೈಕ್ಷಣಿಕ ಮಟ್ಟ | ಗರಿಷ್ಟ ಬೌದ್ಧಿಕ ವಯಸ್ಸು |
|---|---|---|---|---|
| ಅ | 70-90 | ಸಾಮಾನ್ಯ ಮಟ್ಟಕ್ಕಿಂತ ಸ್ವಲ್ಪ ಕಡಿಮೆ ಬುದ್ಧಿ ಶಕ್ತಿ ಅಥವಾ ಮಂದಗತಿಯಲ್ಲಿ ಕಲಿಯುವವರು. | 4 ರಿಂದ 8ನೇ ತರಗತಿ | 12-14 ವರ್ಷ |
| ಬ | 50-70 | ಲಘು ಬುದ್ಧಿ ಮಾಂದ್ಯತೆ (ಮೈಲ್ಡ್ ಮೆಂಟಲ್ ರಿಟಾರ್ಡೇಶನ್) | 3 ರಿಂದ 4ನೇ ತರಗತಿ | 8-12 ವರ್ಷ |
| ಕ | 35-50 | ಗಣನೀಯ ಬುದ್ಧಿ ಮಾಂದ್ಯತೆ (ಮಾಡರೇಟ್ ಮೆಂಟಲ್ ರಿಟಾರ್ಡೇಶನ್) | ಸ್ವ-ಸಹಾಯಕ್ಕೆ ತರಬೇತಿ | 6-8 ವರ್ಷ |
| ಡ | 20-35 | ತೀವ್ರತರ ಬುದ್ಧಿ ಮಾಂದ್ಯತೆ (ಸಿವಿಯರ್ ಮೆಂಟಲ್ ರಿಟಾರ್ಡೇಶನ್) | ಸ್ವ-ಸಹಾಯಕ್ಕೆ ತರಬೇತಿ | 3-6 ವರ್ಷ |
| ಇ | 20ಕ್ಕಿಂತ ಕಡಿಮೆ | ಗರಿಷ್ಟ ಮಟ್ಟದ ಬುದ್ಧಿ ಮಾಂದ್ಯತೆ (ಪ್ರೊಫೌಂಡ್ ಮೆಂಟಲ್ ರಿಟಾರ್ಡೇಶನ್) | ಸ್ವಂತ ಕೆಲಸಕ್ಕೂ ಇತರರನ್ನೇ ಅವಲಂಬಿಸಿರುತ್ತಾರೆ | 3 ವರ್ಷಕ್ಕಿಂತ ಕಡಿಮೆ |

ಮೇಲೆ ನೀಡಿರುವ ಪಟ್ಟಿಯ ಆಧಾರದ ಮೇಲೆ ವಿವಿಧ ಬುದ್ಧಿಶಕ್ತಿ ಸೂಚ್ಯಾಂಕ ಮತ್ತು ಅದಕ್ಕೆ ಅನುಗುಣವಾದ ಬೌದ್ಧಿಕ ವಯಸ್ಸಿನ ಮಕ್ಕಳ ಬಗ್ಗೆ ವಿವರವಾಗಿ ಈಗ ತಿಳಿಯೋಣ:

### ಅ) 70 ರಿಂದ 90 ಬುದ್ಧಿಶಕ್ತಿ ಸೂಚ್ಯಾಂಕದ ನಡುವೆ ಬರುವ ಮಂದಗತಿಯಲ್ಲಿ ಕಲಿಯುವ ಮಕ್ಕಳು

ಬುದ್ಧಿ ಸೂಚ್ಯಾಂಕ 70-90ರ ನಡುವೆ ಬರುವ ಮಂದಗತಿಯಲ್ಲಿ ಕಲಿಯುವವರ ಗರಿಷ್ಠ ಬೌದ್ಧಿಕ ವಯಸ್ಸು ಸುಮಾರು 12-14 ವರ್ಷದಷ್ಟು ಬೆಳೆಯುತ್ತದೆ ಅಷ್ಟೆ. ಆದ್ದರಿಂದ, 4 ರಿಂದ 8ನೇ ತರಗತಿಯವರೆಗಿನ ಇವರ ಶಿಕ್ಷಣ ಸಾಮಾನ್ಯ ಶಾಲೆಗಳಲ್ಲಿ ನಡೆಯಬಹುದು. ಆದರೆ, ಅಲ್ಲಿ

1) ವಿಶೇಷ ಶಿಕ್ಷಣ ವಿಧಾನ
2) ವ್ಯಕ್ತಿಗತ ಶಿಕ್ಷಣ ಯೋಜನೆ
3) ಅಗತ್ಯಕ್ಕೆ ಅನುಗುಣವಾದ ಪಠ್ಯವಸ್ತು
4) ವಿದ್ಯಾರ್ಥಿಯ ಸಾಮರ್ಥ್ಯಕ್ಕೆ ಅನುಗುಣವಾದ ಬೋಧನಾ ವಿಧಾನ-ಇವುಗಳ ಅಗತ್ಯ ಇದೆ.

## ಬ) 50 ರಿಂದ 70 ಬುದ್ಧಿಶಕ್ತಿ ಸೂಚ್ಯಾಂಕದ ನಡುವೆ ಬರುವ ಲಘು ಬುದ್ಧಿಮಾಂದ್ಯ ಮಕ್ಕಳು

ಐ.ಕ್ಯೂ. 50-70ರ ನಡುವೆ ಬರುವ ಲಘು ಬುದ್ಧಿಮಾಂದ್ಯ ಮಕ್ಕಳು 8-12 ವರ್ಷದವರಷ್ಟು ಬೌದ್ಧಿಕವಾಗಿ ಬೆಳೆಯುತ್ತಾರೆ. ಅವರ ಕಲಿಕೆಯ ವೇಗ ಹಾಗೂ ವ್ಯಕ್ತಿಗತ ಅಗತ್ಯಗಳಿಗೆ ಪಠ್ಯ ವಸ್ತುಗಳನ್ನು ಮಾರ್ಪಾಡು ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಅವರಿಗೆ ಮಾಮೂಲು ಶಾಲೆಯ ಪಠ್ಯ ವಸ್ತುವು ಕಷ್ಟವಾಗುತ್ತದೆ. ಪಠ್ಯ ವಸ್ತುವನ್ನು ಅನುಕೂಲಕ್ಕೆ ತಕ್ಕಂತೆ ಮಾರ್ಪಾಡು ಮಾಡಿಕೊಂಡರೂ ಅವರು 3-4 ನೇ ತರಗತಿಯ ಮಟ್ಟಕ್ಕೆ ಮಾತ್ರ ಕಲಿಯಲು ಸಾಧ್ಯ. ಔಪಚಾರಿಕ ಶಾಲಾ ವಿಷಯಗಳಾದ ಇತಿಹಾಸ, ಭೂಗೋಳ, ರೇಖಾಗಣಿತ, ಬೀಜಗಣಿತಗಳಂತಹವುಗಳಿಗೆ ಒತ್ತು ನೀಡುವ ಬದಲು ಅವರ ದೈನಂದಿನ ಜೀವನಕ್ಕೆ ಬೇಕಾಗುವ ಪರಿಕಲ್ಪನೆಗಳನ್ನು ಮಾತ್ರ ಕಲಿಸುವುದು ಸೂಕ್ತ. ಇದನ್ನು ವಿಶೇಷ ಶಿಕ್ಷಣ ತರಬೇತುದಾರರು ರೂಪಿಸುತ್ತಾರೆ. ಇದನ್ನು ಫಂಕ್ಷನಲ್ ಪ್ರೋಗ್ರಾಮಿಂಗ್ ಎನ್ನುತ್ತಾರೆ. "ಮಗುವಿನ ಮನೆ ಮತ್ತು ಪರಿಸರದಲ್ಲಿ ಇರುವ ದಿನ ನಿತ್ಯದ ಅಗತ್ಯಗಳಿಗೆ ನೇರವಾಗಿ ಸಂಬಂಧಿಸಿದ ವಿಷಯಗಳನ್ನು ಬೋಧಿಸುವುದು" – ಎಂದು ಯೋಜನೆಯ ಅರ್ಥ. ಈ ಯೋಜನೆಯಡಿಯಲ್ಲಿ ಬೋಧಿಸಬಹುದಾದ ಪರಿಕಲ್ಪನೆಗಳೆಂದರೆ



1) ಸಣ್ಣ ಪ್ರಮಾಣದಲ್ಲಿ ಹಣಕಾಸಿನ ನಿರ್ವಹಣೆ
2) ಗಡಿಯಾರ ನೋಡಿ ವೇಳೆ ಹೇಳುವುದು
3) ಅಂಗಡಿ, ಮುಂಗಟ್ಟಿಗೆ ಹೋಗಿ ದಿನಸಿ ತರುವುದು
4) ಅಕ್ಕ ಪಕ್ಕದ ಸ್ಥಳಗಳಿಗೆ ಮಾರ್ಗ ತೋರಿಸುವುದು
5) ಅಲ್ಪ ದೈಹಿಕ ಶ್ರಮವಹಿಸಿ ಮಾಡುವ, ಮಿತ ಕೌಶಲ ಹೊಂದಿರುವ ಕೆಲವು ವೃತ್ತಿಪರ ಶಿಕ್ಷಣಕ್ಕೆ ತರಬೇತಿ ಇತ್ಯಾದಿ.

## ಕ) 35 ರಿಂದ 50ರ ನಡುವೆ ಬುದ್ಧಿಶಕ್ತಿ ಸೂಚ್ಯಾಂಕ ಹೊಂದಿರುವ ಗಣನೀಯ ಬುದ್ಧಿಮಾಂದ್ಯ ಮಕ್ಕಳು



35 ರಿಂದ 50ರ ನಡುವೆ ಐ.ಕ್ಯೂ. ಇರುವ ಗಣನೀಯ ಬುದ್ಧಿಮಾಂದ್ಯರಿಗೆ 6-8 ವರ್ಷದವರಷ್ಟು ಬುದ್ಧಿ ಇರುತ್ತದೆ. ಈ ಮಕ್ಕಳ ಶೈಕ್ಷಣಿಕ ಮಟ್ಟ ಹಾಗೂ ಅಗತ್ಯಗಳನ್ನು ಅವರ ಸಮ ವಯಸ್ಸಿನವರೊಡನೆ ಹೋಲಿಸುವುದು ವ್ಯರ್ಥ ಕಸರತ್ತಾಗುತ್ತದೆ. ಈ ಗುಂಪಿನ ಮಕ್ಕಳನ್ನು ಸಾಮಾನ್ಯ ಶಾಲೆಗಳಿಗೆ ಸೇರಿಸುವುದು ಮಕ್ಕಳಿಗೆ ಮತ್ತು ಶಿಕ್ಷಕರಿಗೆ ಇಬ್ಬರಿಗೂ ತೊಂದರೆ! ಇವರಿಗೆ ಶಾಲೆಯ ಔಪಚಾರಿಕ ಬೋಧನೆಗಳಾದ ಓದು, ಬರಹ ಮತ್ತು ಗಣಿತವನ್ನು ಕಲಿಸುವುದು ಸಮಂಜಸವಲ್ಲ. ಬದಲಿಗೆ ವ್ಯಕ್ತಿಗತ ಶಿಕ್ಷಣ ಯೋಜನೆ ಹಾಕಿಕೊಂಡು ಅವರ ದಿನನಿತ್ಯದ ಜೀವನಕ್ಕೆ ಅವಶ್ಯಕ ಎನಿಸಿದ್ದನ್ನು ಕಲಿಸುವುದು ಉತ್ತಮ. ನಿಜಕ್ಕೂ ಇವರಿಗೆ ಬೇಕಿರುವ ಶಿಕ್ಷಣ ಎಂದರೆ

1) ತಮ್ಮ ದೈನಂದಿನ ಅಗತ್ಯ ಕೆಲಸಗಳಾದ ಬಟ್ಟೆ ಧರಿಸಿಕೊಳ್ಳುವುದು
2) ಸ್ನಾನ ಮಾಡುವುದು
3) ತಲೆ ಬಾಚುವುದು

4) ತಿಂಡಿ ತಿನ್ನುವುದು
5) ನೀರು ಕುಡಿಯುವುದು

–ಇತ್ಯಾದಿಗಳನ್ನು ಸ್ವತ: ಮಾಡಿಕೊಳ್ಳುವುದು. ಈ ಗುಂಪಿನ ಬಹುತೇಕ ಮಕ್ಕಳಿಗೆ ಪೂರ್ತಿಯಾಗಿ ತಮ್ಮ ತಮ್ಮ ಕೆಲಸವನ್ನು ಮಾಡಿಕೊಳ್ಳುವಂತೆ ತರಬೇತಿ ನೀಡಬಹುದು.



1) ಮನೆ ಕೆಲಸ ಮಾಡುವುದು.
2) ಕಡಿಮೆ ಮೌಲ್ಯದ ಹಣದ ನಿರ್ವಹಣೆ.
3) ಗಡಿಯಾರದಲ್ಲಿ ಗಂಟೆಯನ್ನು ಮಾತ್ರ ಓದುವುದು.
4) ಅವರ ಸಾಮರ್ಥ್ಯಕ್ಕೆ ಅನುಗುಣವಾದ ಕೈಕೆಲಸಗಳಲ್ಲಿ ವೃತ್ತಿ ಪರ ಶಿಕ್ಷಣವನ್ನು ನೀಡಲು ಆದ್ಯತೆ ಕೊಡಬೇಕು.
5) ಸೂಕ್ತ ಮಾರ್ಗದರ್ಶನ ಇವರಿಗೆ ಅಗತ್ಯ.
6) ಸರಿಯಾದ ಸಮಯದಲ್ಲಿ ಅವರ ಮಟ್ಟಕ್ಕೆ ಹೊಂದುವ ತರಬೇತಿಯನ್ನು ನೀಡಿದರೆ ಅವರು ಉಪಯುಕ್ತ ಜೀವನ ನಡೆಸಬಲ್ಲರು.

**ಇಂತಹವರಿಗೆ ಔಪಚಾರಿಕ ಶಾಲಾ ವಿಧಾನ ಕಷ್ಟ; ಆದರೂ ಶಾಲಾ ವಾತಾವರಣ ಸ್ವಲ್ಪ ಮಟ್ಟಿಗೆ ಬೇಕು.**

ಔಪಚಾರಿಕ ಶಾಲಾ ವಿಧಾನ ಕಷ್ಟವಾದರೂ ಇವರ ಬೆಳವಣಿಗೆಗೆ ಸ್ವಲ್ಪ ಮಟ್ಟಿಗೆ ಶಾಲಾ ವಾತಾವರಣ ಇದ್ದರೆ ಒಳ್ಳೆಯದು. ಎಲ್ಲ ಮಕ್ಕಳೊಂದಿಗೆ ಆಟ, ಗುಂಪು ಚಟುವಟಿಕೆಗಳಲ್ಲಿ ಭಾಗವಹಿಸುವುದು, ಸಾಂಸ್ಕೃತಿಕ ಕಾರ್ಯಕ್ರಮ, ಕಲೆ ಮುಂತಾದ ಪಠ್ಯೇತರ ವಿಷಯಗಳಲ್ಲಿ ಇವರು ಭಾಗಿಗಳಾಗಬಹುದು. ಇದರಿಂದ ಸಾಮಾನ್ಯ ಮಕ್ಕಳನ್ನು ಹತ್ತಿರದಿಂದ ಗಮನಿಸುವ ಅವಕಾಶ ಸಿಕ್ಕಿ ಅವರ ನಡೆ ನುಡಿಗಳನ್ನು ಅನುಕರಣೆ ಮಾಡುವ ಸಾಧ್ಯತೆ ಹೆಚ್ಚು. ಈ ನ್ಯೂನತೆಯ ಬಗ್ಗೆ ತಿಳುವಳಿಕೆ ಇಲ್ಲದ ಇತರ ಶಾಲಾ ಮಕ್ಕಳು ಇವರನ್ನು ಆಟೋಟಗಳಂತಹ ಅವರಿಗೆ ಸಾಧ್ಯವಿರುವಂತಹಾ ಚಟುವಟಿಕೆಗಳಿಂದಲೂ ದೂರವಿಡುತ್ತಾರೆ. ಈ ಸಾಮಾಜಿಕ ಬಹಿಷ್ಕಾರ ನಿಜಕ್ಕೂ ಬುದ್ಧಿಮಾಂದ್ಯತೆಯಿಂದ ಅವರಿಗುಂಟಾಗುವ ಹಾನಿಗಿಂತ ಹೆಚ್ಚಿನ ಕೆಡುಕನ್ನು ಉಂಟುಮಾಡುತ್ತದೆ.

## ಡ) 20 ರಿಂದ 35ರ ನಡುವೆ ಬುದ್ಧಿಶಕ್ತಿ ಸೂಚ್ಯಾಂಕ ಹೊಂದಿರುವ ತೀವ್ರತರ ಬುದ್ಧಿಮಾಂದ್ಯ ಮಕ್ಕಳು

ಬುದ್ಧಿಶಕ್ತಿ ಸೂಚ್ಯಾಂಕ 20 ರಿಂದ 35ರ ನಡುವೆ ಬರುವ ತೀವ್ರತರ ಬುದ್ಧಿಮಾಂದ್ಯರು 3-6 ವರ್ಷ ವಯಸ್ಸಿನ ಮಕ್ಕಳಷ್ಟು ಬೌದ್ಧಿಕವಾಗಿ ಬೆಳೆಯುತ್ತಾರೆ. ಚಿಕ್ಕ ವಯಸ್ಸಿನಲ್ಲೆಲ್ಲಾ, ತಮ್ಮ ದೈನಂದಿನ ಚಟುವಟಿಕೆಗೂ ಇತರರನ್ನು ಅವಲಂಬಿಸಿರುತ್ತಾರೆ. ಅವರಿಗೆ ಹಲ್ಲುಜ್ಜುವುದರಿಂದ ಹಿಡಿದು ರಾತ್ರಿ ಊಟ ಮಾಡಿಸಿ ಮಲಗಿಸುವವರೆಗೂ ಸಂಪೂರ್ಣವಾಗಿ ಇತರರನ್ನು ಅವಲಂಬಿಸಿರುತ್ತಾರೆ. ಇವರಿಗೆ ಔಪಚಾರಿಕ ಶಿಕ್ಷಣ ಪದ್ಧತಿಯಿಂದ ಲಾಭವೂ ಇಲ್ಲ, ಸಾಧ್ಯವೂ ಇಲ್ಲ. ಸ್ವಂತ ಕೆಲಸಗಳನ್ನು ಮಾಡಿಕೊಳ್ಳುವ ತರಬೇತಿಗೆ ಆದ್ಯತೆ ನೀಡಬೇಕು. ನಿರಂತರ ತರಬೇತಿಯಿಂದ ಅವರು ಸ್ವತಂತ್ರವಾಗಿ ಅವರ ಕೆಲವು ಕೆಲಸಗಳನ್ನು ಮಾಡಿಕೊಳ್ಳಲು ಸ್ವಲ್ಪ ಮಟ್ಟಿಗೆ ಶಕ್ತರಾಗುತ್ತಾರೆ. ಈ ಮಟ್ಟದ ಐ.ಕ್ಯೂ. ಇರುವ ಮಕ್ಕಳು ಬುದ್ಧಿಮಾಂದ್ಯತೆಯ ಸಮಸ್ಯೆಯ ಜೊತೆಗೆ ಬೇರೆ ಹಲವು ಸಮಸ್ಯೆಗಳಿಂದಲೂ ತೊಂದರೆ ಅನುಭವಿಸುತ್ತಾರೆ. ತೀವ್ರ ತರದ ಬುದ್ಧಿಮಾಂದ್ಯತೆಯ

ಜೊತೆಗೆ ಅವರಿಗೆ ಮೂರ್ಛೆರೋಗ ಮತ್ತು ವರ್ತನಾ ಸಮಸ್ಯೆಗಳೂ ಇರುತ್ತವೆ. ಇಂತಹ ಮಕ್ಕಳನ್ನು ನೋಡಿಕೊಳ್ಳುವ ರೀತಿ ಎಲ್ಲರಿಗೂ ತಿಳಿದಿರುವುದಿಲ್ಲ. ಆದ್ದರಿಂದ, ಅವರು ವಿಶೇಷ ಶಿಕ್ಷಣ ತಜ್ಞರು ಹಾಗೂ ಪುನರ್ವಸತಿ ವೃತ್ತಿಪರ ತಜ್ಞರಿಂದ ಮಾಹಿತಿ/ಮಾರ್ಗದರ್ಶನ ಪಡೆಯಬೇಕು.

## ಇ) 20ಕ್ಕಿಂತ ಕಡಿಮೆ ಬುದ್ಧಿಶಕ್ತಿ ಸೂಚ್ಯಾಂಕ ಹೊಂದಿರುವ ಮಕ್ಕಳು.

ಈ ಹಂತದಲ್ಲಿ ವಿವಿಧ ಮಟ್ಟದ ಬುದ್ಧಿ ಶಕ್ತಿ 20ಕ್ಕಿಂತಲೂ ಕಡಿಮೆ ಐ.ಕ್ಯೂ. ಇರುವ ಮಕ್ಕಳು 3 ವರ್ಷದ ಮಗುವಿಗಿಂತ ಕಡಿಮೆ ಬುದ್ಧಿಶಕ್ತಿ ಹೊಂದಿರುತ್ತಾರೆ. ಇವರು ಜೀವನ ಪರ್ಯಂತ ತಮ್ಮ ದಿನನಿತ್ಯದ ಅಗತ್ಯ ಕಾರ್ಯಗಳಿಗೂ ಇತರರನ್ನು ಸಂಪೂರ್ಣವಾಗಿ ಅವಲಂಬಿಸಿರುತ್ತಾರೆ. ಇವರಿಗೆ ಮೇಲ್ವಿಚಾರಕರು ಬೇಕೇ ಬೇಕು. ಕೆಲವರಂತೂ ಶಾಶ್ವತವಾಗಿ ಹಾಸಿಗೆಯಲ್ಲಿರುತ್ತಾರೆ. ಇವರ ದಿನ ನಿತ್ಯದ ಪ್ರತಿಯೊಂದು ಕೆಲಸಕ್ಕೂ ಸಹಾಯಕರನ್ನು ನೇಮಿಸಬೇಕು.

ಇದುವರೆಗೆ ಸಾಮಾನ್ಯ ಮಟ್ಟಕ್ಕಿಂತ ಕೆಳಮಟ್ಟದ ಐ.ಕ್ಯೂ. ಸೂಚ್ಯಾಂಕಗಳನ್ನು ಹೊಂದಿದ ಗುಂಪಿನ ಮಕ್ಕಳ ಶೈಕ್ಷಣಿಕ ನಿರೀಕ್ಷೆಗಳ ಬಗ್ಗೆ ತಿಳಿದುಕೊಂಡೆವು. ಎಲ್ಲ ಮಟ್ಟದ ಮಕ್ಕಳಿಂದಲೂ ಒಂದೇ ರೀತಿಯ ಶೈಕ್ಷಣಿಕ ಮಟ್ಟ; ವರ್ತನೆ ನಿರೀಕ್ಷಿಸಲು ಅಸಾಧ್ಯ. ಅಲ್ಲದೆ ಪ್ರತಿಯೊಂದು ಮಟ್ಟದ ಮಕ್ಕಳಿಗೂ ಬೇರೆ ಬೇರೆ ರೀತಿಯ ಕಲಿಕಾ ವಿಧಾನಗಳನ್ನು ಮಾರ್ಗದರ್ಶನವನ್ನು ಅನುಸರಿಸಬೇಕು ಎಂಬ ವಿಷಯವನ್ನು ತಿಳಿದುಕೊಂಡೆವು. ಹಾಗಾದರೆ ಈ ರೀತಿಯ ಮಕ್ಕಳ ತರಬೇತಿಗೆ ಮನೆಯಲ್ಲಿ ಮಾರ್ಗದರ್ಶನ ನೀಡುವುದು ಹೇಗೆ? ಶಾಲೆಯಲ್ಲಿ ಮಾರ್ಗದರ್ಶನ ನೀಡುವುದು ಹೇಗೆ?



ಮುಂದಿನ ಹಂತದಲ್ಲಿ ಈ ರೀತಿಯ ಮಕ್ಕಳ ತರಬೇತಿಗೆ ಬೇಕಾದ ವಿವಿಧ ಬಗೆಯ ಮಾರ್ಗದರ್ಶನ ವಿಧಾನಗಳನ್ನು ಅಧ್ಯಯನ ಮಾಡೋಣ.

ಅಧ್ಯಾಯ-4

# ಬುದ್ಧಿಮಾಂದ್ಯ ಮಕ್ಕಳ ತರಬೇತಿಗೆ ಮಾರ್ಗದರ್ಶನ

## ನಿಧಾನಗತಿಯಲ್ಲಿ ಕಲಿಯುವ ಮಕ್ಕಳು ಮತ್ತು ಬುದ್ಧಿಮಾಂದ್ಯ ಮಕ್ಕಳು:

ಇವೆರಡು ಗುಂಪಿನ ಮಕ್ಕಳಲ್ಲಿ ನಿಚ್ಚಳ ವ್ಯತ್ಯಾಸ ಇದೆ. ಅದನ್ನು ತಿಳಿದು ಅವರ ನಿರೀಕ್ಷೆಗೆ ಸೂಕ್ತ ಮಾರ್ಗದರ್ಶನ ನೀಡಬೇಕು.

### ಮಂದಗತಿಯಲ್ಲಿ ಕಲಿಯುವ ಮಕ್ಕಳು ಯಾರು/ಏನು?



ಸರಾಸರಿಗಿಂತ ಸ್ವಲ್ಪ ಕಡಿಮೆ ಬುದ್ಧಿಶಕ್ತಿ ಸೂಚ್ಯಾಂಕ ಇರುವ, ಅಂದರೆ, ಸುಮಾರು 70 ರಿಂದ 90ರ ಅಂತರದಲ್ಲಿ ಐ.ಕ್ಯೂ. ಇರುವ ಮಕ್ಕಳನ್ನು ಮಂದಗತಿಯಲ್ಲಿ ಕಲಿಯುವ ಮಕ್ಕಳು ಎಂದು ಕರೆಯುತ್ತಾರೆ. ಸಾಮಾನ್ಯ ಮಟ್ಟದ ಬುದ್ಧಿಶಕ್ತಿ (90ಕ್ಕಿಂತ ಹೆಚ್ಚು 110ಕ್ಕಿಂತ ಕಡಿಮೆ) ಮತ್ತು ಬುದ್ಧಿಮಾಂದ್ಯತೆ (70ಕ್ಕಿಂತ ಕಡಿಮೆ) ಇವೆರಡು ಗುಂಪಿನವರ ನಡುವೆ ಬರುವ ಗುಂಪು ಇದು. ಆದ್ದರಿಂದ, ಇವರನ್ನು ಗಡಿ ರೇಖೆಯ ಬುದ್ಧಿಮಟ್ಟ ಹೊಂದಿರುವವರು (ಬಾರ್ಡರ್ ಲೈನ್ ಇಂಟೆಲಿಜೆನ್ಸ್) ಎಂದೇ ಕರೆಯುತ್ತಾರೆ. ಅಂದರೆ ಇವರ ಬುದ್ಧಿ ಸಾಮಾನ್ಯ ಮಟ್ಟಕ್ಕಿಂತ ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಿರುತ್ತದೆ. ಆದರೆ ಇತ್ತೀಚೆಗೆ ಚಿಕಿತ್ಸಾ ವಿಧಾನದಲ್ಲಿ ಈ ಹೆಸರು ಹೆಚ್ಚಿಗೆ ಬಳಕೆಯಲ್ಲಿಲ್ಲ. ಬದಲಿಗೆ ಇಂತಹವರಿಗೆ ಮಂದಗತಿಯಲ್ಲಿ ಕಲಿಯುವವರು ಎಂದೇ ಹೇಳುತ್ತಾರೆ.

## ಬುದ್ಧಿಮಾಂದ್ಯ ಮಕ್ಕಳ ತರಬೇತಿಗೆ ಶಾಲೆ/ಮನೆಯಲ್ಲಿ ಮಾರ್ಗದರ್ಶನ ನೀಡುವ ವಿಧಾನ

ಸಾಮಾನ್ಯ ಎಂದು ಕರೆಸಿಕೊಳ್ಳುವ ಮಕ್ಕಳಿಗೆ ಸೂಕ್ತವೆನಿಸಿರುವ ನಮ್ಮ ಶಿಕ್ಷಣ ವಿಧಾನವು ಮಂದಗತಿಯಲ್ಲಿ ಕಲಿಯುವ ಹಾಗೂ ಲಘು, ಗಣನೀಯ ಮಟ್ಟದ ಬುದ್ಧಿಮಾಂದ್ಯತೆಯಿರುವ ಮಕ್ಕಳಿಗೆ ಪರಿಹಾರ ನೀಡದು. ಅವರಿಗೆ ಚಟುವಟಿಕೆಗಳಿಂದ ಕೂಡಿದ ಅನೌಪಚಾರಿಕ ಶಿಕ್ಷಣವು ಪ್ರಯೋಜನಕರ. ಈ ಮಕ್ಕಳು ಕಲಿಕೆ–ಬೋಧನೆ ಸರಳ ಚಟುವಟಿಕೆಗಳಿಂದ ಕ್ಲಿಷ್ಟತೆಯ ಕಡೆಗೆ ನಿಧಾನವಾಗಿ ಏರಬೇಕು. ಮೊದಲು ಕಲಿಯಬೇಕಾಗಿರುವ ಪರಿಕಲ್ಪನೆಗೆ ಸಿದ್ಧತೆಯು ಸರಿಯಾಗಿ ಆಗದಿದ್ದರೆ, ಮುಂಬರುವ ಶೈಕ್ಷಣಿಕ ವರ್ಷಗಳಲ್ಲಿ ಅವರು ಹೆಚ್ಚಿನ ತೊಂದರೆಯನ್ನು ಅನುಭವಿಸುತ್ತಾರೆ, ಹಾಗೂ ಕಲಿಕೆಯ ಮಟ್ಟದಲ್ಲಿ ವರ್ಷ ಕಳೆದಂತೆಯೇ ಈ ಅಂತರ ಹೆಚ್ಚುತ್ತಾ ಹೋಗುತ್ತದೆ.

**ನಿಧಾನ ಗತಿಯಲ್ಲಿ ಕಲಿಯುವ ಮತ್ತು ಶಕ್ಷಣಿಕ ಸಾಧ್ಯತಾ ಮಟ್ಟದ ಮಕ್ಕಳಿಗೆ ತರಬೇತಿ ನೀಡಲು ಕೆಲವು ಸಲಹೆಗಳು.**

1. ಕಲಿತದ್ದನ್ನು ಮರೆಯದಂತೆ ಪುನರಾವರ್ತನೆ ನೀಡುತ್ತಿರಬೇಕು. ಕಲಿಯಲು ಹೆಚ್ಚು ಅಭ್ಯಾಸದ ಅಗತ್ಯವಿದೆ.
2. ಹೆಚ್ಚಿನ ಅಭ್ಯಾಸ ನೀಡಬೇಕಾಗಿರುವುದರಿಂದ ವೈವಿಧ್ಯಮಯ ಕಲಿಕಾ ಚಟುವಟಿಕೆಗಳನ್ನು ನೀಡಿ.
3. ಪರಿಹಾರಾತ್ಮಕ ಬೋಧನೆ ಮಕ್ಕಳಲ್ಲಿರುವ ನಿರ್ದಿಷ್ಟ ತೊಂದರೆಯನ್ನು ಹೋಗಲಾಡಿಸುವ ಗುರಿ ಹೊಂದಿರಲಿ
4. ಕಲಿಕೆಯ ಪ್ರಾರಂಭದ ಹಂತಗಳಲ್ಲಿ ಬಳಸುವ ಪರಿಕಲ್ಪನೆಗಳು ಮಕ್ಕಳಿಗೆ ಪರಿಚಯವಿರುವಂತಹವುಗಳೇ ಆಗಿರಲಿ, ಅಥವಾ ಸುಲಭವಾಗಿ ಕಲಿಯುವಂತಹದ್ದಾಗಿರಲಿ.
5. ಆಕಾರ ಸಾಮ್ಯತೆ ಮತ್ತು ಧ್ವನಿ ಸಾಮ್ಯತೆಯಿರುವ ಅಕ್ಷರಗಳನ್ನು ಒಟ್ಟೊಟ್ಟಿಗೆ ಕಲಿಸಬೇಡಿ, ಬಿಡಿಯಾಗಿಯೂ ಕಲಿಸಬೇಡಿ. ಪದಗಳಲ್ಲಿ ಬಳಸಿ ಅಂತಹ ಅಕ್ಷರಗಳನ್ನು ಕಲಿಸಿ.

| | | | |
|---|---|---|---|
| ಉದಾ: ಲಂಗ: | ಲ | ಆಳು: | ಳ |
| | ಲತ | | ಕೊಳ |
| | | | ಹೀಗೆ |

6. 'ಇಂದ್ರಿಯಾನುಭವಗಳನ್ನು ಮಕ್ಕಳು ಹೆಚ್ಚಿಗೆ ಪಡೆದುಕೊಳ್ಳುವಂತೆ ನೋಡಿಕೊಳ್ಳಿ. ಕೇಳುವುದು, ನೋಡುವುದು ಮುಟ್ಟುವುದು ಇವು ಹೊಂದಾಣಿಕೆಯಾದರೆ ಮಗುವಿಗೆ ಕಲಿಕೆ ಸುಲಭ.
7. ನಿಮ್ಮ ಬೋಧನೆಯ ವಿಧ ಕ್ರಮಬದ್ಧವಾಗಿರಲಿ ಮತ್ತು ತಪ್ಪದೆ ನಡೆಯಲಿ ಪ್ರಾರಂಭದಲ್ಲಿ ಯಶಸ್ಸುಗಳಿಸುವಂತೆ ನೋಡಿ ಕೊಳ್ಳಿ. ಇದರಿಂದಾಗಿ ಮಕ್ಕಳು ತಾವಾಗಿಯೇ ಭಾಗವಹಿಸಲು ಆಸಕ್ತಿ ತೋರುತ್ತಾರೆ.

ಕಲಿಸುವವರು ಕಲಿಸುವ ಪಠ್ಯವಸ್ತುವನ್ನು ಮಾತ್ರ ಗಮನದಲ್ಲಿಟ್ಟುಕೊಂಡರೆ ಸಾಲದು. ಮಗುವು ಆತ್ಮ ವಿಶ್ವಾಸ ಬೆಳೆಸಿಕೊಳ್ಳಲು ನೆರವಾಗಬೇಕು. ಇಬ್ಬರ ನಡುವೆ ಇರುವ ಉತ್ತಮ ಬಾಂಧವ್ಯವೇ ಮಕ್ಕಳಲ್ಲಿ ಆಶಾಭಾವ, ಉತ್ಸಾಹ ಹಾಗೂ ಕಲಿಯುವ ಆಸಕ್ತಿಯನ್ನು ಬೆಳೆಸುತ್ತದೆ.

ಪರಿಹಾರಾತ್ಮಕ ಬೋಧನೆ ಮಾತು–ಭಾಷೆಯ ಬೆಳವಣಿಗೆಯಿಂದ ಆರಂಭವಾಗಲಿ. ಜೊತೆಯಲ್ಲಿಯೇ ಓದು, ಬರಹ, ಗಣಿತದ ಕುಶಲತೆಯನ್ನೂ ನಿಧಾನಕ್ಕೆ ಕಲಿಸಲು ಆರಂಭಿಸಿ.

ಈ ಮಟ್ಟದ ಬುದ್ಧಿಶಕ್ತಿ ಇರುವ ಮಗು ಹೆಚ್ಚೆಂದರೆ 4 ರಿಂದ 7ನೇ ತರಗತಿಯ ಮಟ್ಟಕ್ಕೆ ಕಲಿಯಬಹುದು. ಇದರಿಂದ ಅವರು ತಮ್ಮ ದೈನಂದಿನ ಜೀವನ ನಿರ್ವಹಣೆಗೆ ಸಾಕಾಗುವಷ್ಟು ಶೈಕ್ಷಣಿಕ ಸಾಮರ್ಥ್ಯವನ್ನು ಗಳಿಸಿಕೊಳ್ಳುತ್ತಾರೆ.



ಉದಾ: ಬಸ್ಸಿನ ನಂಬರ್/ಹೆಸರು ಓದುವುದು, ಅಂಗಡಿಯ ಹೆಸರು ಗುರುತಿಸಿಕೊಳ್ಳುವುದು–ಇತ್ಯಾದಿ.

ಸ್ವತಂತ್ರವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡಾಡಬೇಕಾಗುವಷ್ಟು ಮಾತು ಭಾಷೆಯ ಬಳಕೆಯ ಜೊತೆಗೆ ಇಂತಹ ಮಕ್ಕಳಿಗೆ ಜೀವನ ನಿರ್ವಹಣೆಗೆ ಬೇಕಾಗುವಂತಹ ವೃತ್ತಿ ತರಬೇತಿ ನೀಡುವುದು ಉತ್ತಮ. ತರಬೇತಿ ನೀಡಿದರೆ ಇವರು ಹಲವಾರು ರೀತಿಯ ಕೆಲಸಗಳನ್ನು ಅಚ್ಚುಕಟ್ಟಾಗಿ ಮಾಡಲು ಮಾಡಲು ಸಮರ್ಥರಾಗುತ್ತಾರೆ.

ಉದಾ: ಗ್ರಂಥಾಲಯಗಳಲ್ಲಿ ಪುಸ್ತಕ ಜೋಡಿಸುವುದು, ಸಾಮಾನು ಜೋಡಿಸುವುದು ಮನೆ ಕೆಲಸ (ಹೌಸ್ ಕೀಪಿಂಗ್) ತೋಟಗಾರಿಕೆ, ಕರಕುಶಲ ವಸ್ತುಗಳ ತಯಾರಿಕೆ, ಪ್ರಿಂಟಿಂಗ್ ಕೆಲಸ–

ಹೀಗೆ ಹಲವಾರು ದೈಹಿಕ ಕೆಲಸಗಳ ಕಲಿಕೆಯಲ್ಲಿ ಬುದ್ಧಿಮಾಂದ್ಯತೆಯುಳ್ಳ ಮಕ್ಕಳು ತಮ್ಮನ್ನು ತಾವು ತೊಡಗಿಸಿಕೊಳ್ಳಬಹುದು.

ಶೈಕ್ಷಣಿಕ ಕ್ಷೇತ್ರದಲ್ಲಿ ಬುದ್ಧಿಮಾಂದ್ಯತೆಯಿಂದಾಗಿ ಉಂಟಾಗುವ ತೊಡಕುಗಳು ಮುಖ್ಯವಾಗಿ **ಗಮನ ಕೇಂದ್ರೀಕರಣದ ಸಮಸ್ಯೆ, ಮತ್ತು ಜ್ಞಾಪಕ ಶಕ್ತಿಯ ಕೊರತೆ**

**1. ಗಮನ ಕೇಂದ್ರೀಕರಣದ ಸಮಸ್ಯೆ:** ಕಲಿಯಲು ಒಂದು ವಿಷಯದ ಮೇಲೆ ಗಮನವನ್ನು ಕೇಂದ್ರೀಕರಿಸುವುದು ಅಗತ್ಯ. ಬುದ್ಧಿಮಾಂದ್ಯ ಮಗುವಿಗೆ ಒಂದೇ ವಿಷಯದ ಮೇಲೆ ಹೆಚ್ಚು ವೇಳೆ ಗಮನವನ್ನು ಇಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ನಾವು ಅವರಿಗೆ ಕಲಿಸುವಾಗ ಕೆಲವೊಂದು ವಿಧಾನಗಳನ್ನು ಅನುಸರಿಸಬೇಕು.

- ದಪ್ಪ ಅಕ್ಷರಗಳು ಹಾಗೂ ಬಣ್ಣಗಳು ಇದ್ದರೆ ಮಗುವಿನ ಗಮನವು ಕಲಿಕಾ ವಸ್ತುವಿನ ಮೇಲೆ ಕೇಂದ್ರೀಕೃತವಾಗುತ್ತದೆ.
- ಯಾವುದೇ ಕಾರ್ಯವನ್ನು ಮಾಡಲು ಹಂತ ಹಂತವಾಗಿ ಸೂಚನೆಗಳನ್ನು ಕೊಡಿ.

ಉದಾ: ಪುಸ್ತಕ ತೆಗೆ. ಬರೆಯುವ ಪುಟ ತೆರೆ.
ಪೆನ್ಸಿಲ್ಲು ತೆಗೆದುಕೋ. ಬೋರ್ಡಿನಲ್ಲಿರುವ ವಾಕ್ಯವನ್ನು ಓದು.
ಈಗ ಪುಸ್ತಕದಲ್ಲಿ ಅದರಂತೆ ಬರೆ. (ತಪ್ಪಿದ್ದರೆ ತಿದ್ದಿ ಸರಿಪಡಿಸು)

- ಬಿಳಿ ಬಣ್ಣದ ಕಾರ್ಡುಗಳಲ್ಲಿ ಈ ರೀತಿಯ ಹಂತಗಳನ್ನು ಬರೆದು ಮಗುವು ಅದನ್ನು ಅನುಸರಿಸುವಂತೆ ತರಬೇತಿ ಕೊಡಿ.
- ಕೇಳಿದ್ದನ್ನು ಅನುಸರಿಸಲು ಟೇಪ್ ರೆಕಾರ್ಡರ್ ಬಳಸಿ ಹಂತ ಹಂತವಾಗಿ ಸೂಚನೆಗಳನ್ನು ಕೊಡಿ.
- ಗೋಡೆಯ ಮೇಲೆ ಚಾರ್ಟ್‌ಗಳನ್ನು ಬರೆದು ಹಾಕಿ. ಅದರಲ್ಲಿ ಸಾಧ್ಯವಿರುವಲ್ಲೆಲ್ಲಾ ಆಕರ್ಷಕ ಚಿತ್ರಗಳೂ ಇರಲಿ.
- ಶಾಲೆಯಲ್ಲಿ ಕಲಿಯುವ ವಿಷಯಗಳ ಬಗ್ಗೆ ಮನೆಯಲ್ಲಿ ಒಂದು ಚೌಕಟ್ಟು ಹಾಕಿ ಕಳುಹಿಸಿ. ಆಗ ಉಪಾಧ್ಯಾಯರು ಮಾಡುವ ಪಾಠ ಅರ್ಥವಾಗುತ್ತದೆ. ಪರೀಕ್ಷೆಗೆ ಮುಂಚೆ ಅದಕ್ಕೆಂದೇ ತಯಾರಿ ಮಾಡಿಸಿ.



**2) ಜ್ಞಾಪಕ ಶಕ್ತಿಯ ಕೊರತೆ:**

- ಬುದ್ಧಿಮಾಂದ್ಯ ಮಕ್ಕಳು ಆಗ ಕಲಿತದ್ದನ್ನು ಆಗಲೇ ಮರೆತು ಬಿಡುವುದು ಕೂಡ ಅವರ ಒಂದು ಲಕ್ಷಣ
- ನೆನಪಿನಲ್ಲಿಟ್ಟುಕೊಳ್ಳಲು ಸಾಧ್ಯವಿರುವಷ್ಟು ಮಾತ್ರವನ್ನೇ ಅವರಿಗೆ ಒಮ್ಮೆಗೆ ಕೊಡಿ.
- ಕಲಿತ ವಿಷಯಗಳ'ನ್ನು ಸರಿಯಾದ ಕ್ರಮದಲ್ಲಿ ನೆನಪಿಸಿಕೊಳ್ಳಲು ದಿನನಿತ್ಯವೂ ತರಬೇತಿ ಕೊಡಿ.
- ನೋಡಿ ಮತ್ತು ಕೇಳಿ ಕಲಿಯುವ ಅವಕಾಶ ಕಲ್ಪಿಸಿ.

(ದೊಡ್ಡ ಮರ ಎಂದು ಹೇಳುವಾಗ ದೊಡ್ಡ ಮರವನ್ನು ತೋರಿಸಿ ಮತ್ತು ಹೇಳುವಾಗ ದೊಡ್ಡದು ಎಂದು ಸ್ವರವನ್ನು ಎತ್ತರಿಸಿ ಮತ್ತು ಕೈಯಲ್ಲಿ ಸನ್ನೆ ಮಾಡಿ ಅಭಿನಯಿಸಿ ತೋರಿಸಿ.)



ಬೇಕಾದ ವಿಷಯವನ್ನು ಮಿದುಳಿನಲ್ಲಿ ಶೇಖರಿಸಿ ಇಟ್ಟುಕೊಂಡು ಸರಿಯಾದ ಸಮಯದಲ್ಲಿ ಅದನ್ನು ನೆನಪಿಸಿಕೊಳ್ಳುವುದು ಕಲಿಯಲು ಬೇಕಾಗಿರುವ ಒಂದು ಸಾಮರ್ಥ್ಯ. ಅವರ ವಯಸ್ಸಿಗನುಗುಣವಾಗಿ ಈ ಸಾಮರ್ಥ್ಯವು ಬುದ್ಧಿಮಾಂದ್ಯ ಮಕ್ಕಳಲ್ಲಿ ಅತ್ಯಂತ ಕಡಿಮೆಯಿರುತ್ತದೆ. ಬೌದ್ಧಿಕ ವಯಸ್ಸಿನಲ್ಲಿ ಅವರ ಜೊತೆಯವರಷ್ಟು ಮಾತ್ರ ಅವರಿಗೆ ನೆನಪಿನಲ್ಲಿಟ್ಟುಕೊಳ್ಳಲು ಸಾಧ್ಯ. ಆದ್ದರಿಂದ ಬುದ್ಧಿಮಾಂದ್ಯ ಈ ವಯಸ್ಸಿನಲ್ಲಿ ಇಷ್ಟೇ ನೆನಪಿನ ಶಕ್ತಿ ಸಾಧ್ಯ ಎಂದು ಒಪ್ಪಿಕೊಳ್ಳಿ. ವ್ಯರ್ಥವಾಗಿ ಮಗುವಿನ ಮೇಲೆ ಒತ್ತಡ ಹೇರಬೇಡಿ.

ಗಣನೀಯ ಮತ್ತು ತೀವ್ರತರ ಬುದ್ಧಿಮಾಂದ್ಯ ಮಕ್ಕಳಿಗೆ ದೈನಂದಿನ ಚಟುವಟಿಕೆಗಳನ್ನು ಕಲಿಯಲು ಸರಿಯಾದ ಮಾರ್ಗದರ್ಶನ ಸಿಕ್ಕಿರುವುದಿಲ್ಲ. ಇಂತಹ ಮಕ್ಕಳಿಗೆ ಉನ್ನತ ಮಟ್ಟದ ಪರಿಕಲ್ಪನೆಗಳನ್ನು ಕಲಿಸಲು ಆಗುವುದಿಲ್ಲ . ಈ ಮಟ್ಟದ ಬುದ್ಧಿಮಾಂದ್ಯ ಮಕ್ಕಳಿಗೆ ಅಗತ್ಯವಿರುವಷ್ಟು ತರಬೇತಿ ನೀಡಿ ಅವರನ್ನು ಸಾಧ್ಯವಿರುವಷ್ಟರ ಮಟ್ಟಿಗೆ ಸ್ವಾವಲಂಬಿಗಳಾಗಿ ಮಾಡಲು ಕೆಲವು ಸೂಚನೆ/ಮಾರ್ಗದರ್ಶನಗಳನ್ನು ಈ ಕೆಳಗೆ ನೀಡಲಾಗಿದೆ.

## ಮಾರ್ಗದರ್ಶಿ ಸೂಚನೆಗಳು

**ಅ) ಸರಳತೆಯಿಂದ ಕ್ಲಿಷ್ಟತೆಗೆ:** ಯಾವಾಗಲೂ ಸರಳವಾಗಿರುವ ವಿಷಯವನ್ನು ಮೊದಲಿಗೆ ತೆಗೆದುಕೊಂಡು ನಿಧಾನವಾಗಿ ಅದರ ಮೂಲಕ ಕಷ್ಟದ ವಿಷಯಕ್ಕೆ ಬನ್ನಿ. ಉದಾಹರಣೆಗೆ ಬಣ್ಣಗಳ ಪರಿಕಲ್ಪನೆಯನ್ನು ಹೇಳಿಕೊಡುವಾಗ ಬಣ್ಣಗಳನ್ನು ಹೊಂದಿಸುವುದು, ವರ್ಗೀಕರಿಸುವುದು, ಗುರುತಿಸುವುದು, ಹೆಸರಿಸುವುದು ಮುಂತಾದ ಚಟುವಟಿಕೆಗಳಿಂದ ಕ್ರಮಬದ್ಧವಾಗಿ ಪ್ರಾರಂಭಿಸಿ. ಒಂದೇ ಒಂದು ಹಂತವನ್ನು ಬಿಟ್ಟರೂ ಮಗುವು ಗೊಂದಲಕ್ಕೆ ಒಳಗಾಗುವುದು ಖಚಿತ, ಹಾಗೂ ಇದು ತಪ್ಪು ಕಲ್ಪನೆಗೆ ಕೂಡ ದಾರಿಯಾಗುತ್ತದೆ.

**ಆ) ಪರಿಚಿತ ವಿಷಯದಿಂದ ಅಪರಿಚಿತ ವಿಷಯದೆಡೆಗೆ:**-ಯಾವಾಗಲೂ ಮಗುವಿಗೆ ತಿಳಿದಿರುವ ವಿಷಯದಿಂದ ಬೋಧನೆಯನ್ನು ಪ್ರಾರಂಭಿಸಿ ನಂತರ ಅದನ್ನು ಹೊಸ ವಿಷಯಕ್ಕೆ ಜೋಡಿಸಿ. ಉದಾಹರಣೆಗೆ ಚೆಂಡನ್ನು ಎಸೆಯುವುದು 'ಹಿಡಿಯುವುದು' ಮತ್ತು 'ಒದೆಯುವುದು' ಎಂಬ ಮೂರನ್ನು ಹೇಳಿಕೊಡಬೇಕಿದ್ದರೆ, ಎಸೆಯುವುದರಿಂದ ಪ್ರಾರಂಭಿಸಿ. ಮುಂದಿನ ಹೆಜ್ಜೆಯಾದ ಹಿಡಿಯುವುದಕ್ಕೆ ಹೋಗಿ.

**ಇ) ಮೂರ್ತದಿಂದ ಅಮೂರ್ತದ ಕಡೆಗೆ (ಆಕಾರದಿಂದ ನಿರಾಕಾರದ ಕಡೆಗೆ):-** ಶಾಲಾ ಪೂರ್ವ ವಯಸ್ಸಿನ ಮಕ್ಕಳಿಗೆ ಅಮೂರ್ತವನ್ನು (ನಿರಾಕಾರ) ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಗಾದೆಗಳು, ನೀತಿಕತೆಗಳು, ವಿಷಯಗಳಲ್ಲಿನ ಸಾಮ್ಯತೆ, ಕತೆಗಳಲ್ಲಿನ ಮೌಲ್ಯ- ಇವುಗಳನ್ನು ಅರ್ಥೈಸಲು ಅವರಿಗೆ ಸಾಧ್ಯವಿಲ್ಲ. ಇದರ ಬದಲಿಗೆ ನಿಜವಾದ ವಸ್ತುಗಳು ಮತ್ತು ಘಟನೆಗಳನ್ನು ಆಧರಿಸಿ, ಅದಕ್ಕೆ ಹೊಂದಿಸಿದ ನೀತಿಯನ್ನು ಅಥವಾ ಯಾವುದೇ ಅಮೂರ್ತ ವಿಷಯವನ್ನು ವಿವರಿಸಿದರೆ, ಅವರಿಗೆ ತಿಳಿದುಕೊಳ್ಳುವುದು ಸ್ವಲ್ಪ ಮಟ್ಟಿಗೆ ಸುಲಭವಾಗುತ್ತದೆ. ಇಂತಹ ಮಕ್ಕಳಿಗೆ ಕಲ್ಪಸಿಕೊಳ್ಳಲು ಬಿಡುವುದಕ್ಕಿಂತ ನೇರವಾಗಿ ಅವರಿಗೆ ತಿಳಿದಿರುವ, ಕಾಣ್ಣಸಿಗುವ ವಿಷಯಗಳನ್ನು ಆಧರಿಸಿ ಉದಾಹರಣೆಗಳ ಮೂಲಕವೇ ಬೋಧಿಸಿ.

**ಈ) ಇಡಿಯಿಂದ ಬಿಡಿಂಸೆಡೆಗೆ ( ಒಟ್ಟಾರೆಯಿಂದ ನಿರ್ದಿಷ್ಟತೆಯ ಕಡೆಗೆ):** ಮಗುವಿನಲ್ಲಿ ಒಂದು ವಿಷಯದ ಒಟ್ಟಾರೆಯ ಕಲ್ಪನೆಯನ್ನು ಮೊದಲು ಮೂಡಿಸಿ, ನಂತರ ಚಿಕ್ಕಪುಟ್ಟ ಸಣ್ಣ ಅಂಶಗಳ ಮಾಹಿತಿಯನ್ನು ಹೇಳಿರಿ. ದೇಹದ ಭಾಗಗಳ ಬಗ್ಗೆ ನೀವು ಹೇಳುವಾಗ 'ಮುಖ' ಎಂದು ಒಟ್ಟಾರೆಯಾಗಿ ತೋರಿಸಿ, ಹೇಳಿರಿ/ನಂತರ ಮುಖದಲ್ಲಿರುವ ಬಿಡಿ ಭಾಗಗಳಾದ ಕಣ್ಣು, ಮೂಗು, ಬಾಯಿಯ ಪರಿಚಯ ಮಾಡಿಕೊಡಿ. ಇಲ್ಲದಿದ್ದರೆ ಬಿಡಿ ಭಾಗಕ್ಕೂ, ಪೂರ್ಣ ಮುಖಕ್ಕೂ ಹೊಂದಾಣಿಕೆ ಮಾಡಿಕೊಳ್ಳಲು ಅವರಿಗೆ ಬರುವುದೇ ಇಲ್ಲ. ನಂತರ 'ಬಾಯಿ' ಒಂದನ್ನೇ ತೆಗೆದುಕೊಂಡು ಅದರ ಭಾಗಗಳಾದ ಹಲ್ಲು, ತುಟಿ, ನಾಲಗೆ ಇವುಗಳನ್ನು ತೋರಿಸಿ ಹೇಳಿ ಕೊಡಿ.



**ಉ)ಅವಳಿಗಳ ಕಥೆ – ಬೇರೆ ಬೇರೆ ಬೋಧನಾ ಗುರಿಗಳು:** ಅನಿಲ್ ಮತ್ತು ಸುನಿಲ್ ಅವಳಿಗಳು. ಇಬ್ಬರ ಐ.ಕ್ಯೂ. ಪರೀಕ್ಷಿಸಿ ಇಬ್ಬರೂ ಕಡಿಮೆ ಬುದ್ಧಿವಂತರೆಂದು ಗುರುತಿಸಲಾಗಿದೆ. ಇಬ್ಬರಿಗೂ ಮನೆಯಲ್ಲಿ ಕೈಗೊಳ್ಳುವಂತಹ ವ್ಯಕ್ತಿಗತ ಶಿಕ್ಷಣ ಯೋಜನೆಯನ್ನು ತಯಾರಿಸಿ ಕೊಡಲಾಗಿತ್ತು. ವಿಶೇಷ ಶಿಕ್ಷಕರು ಇಬ್ಬರಿಗೂ ಬೇರೆ ಬೇರೆ ಬೋಧನಾ ಗುರಿಗಳನ್ನು ಇಟ್ಟುಕೊಂಡು ಚಟುವಟಿಕೆ ಮಾಡಿಸುತ್ತಿದ್ದುದನ್ನು ನೋಡಿ ತಾಯಿಗೆ ಆಶ್ಚರ್ಯವಾಯಿತು. ಅನಿಲ್‌ಗೆ ಎರಡು ಬಣ್ಣಗಳನ್ನು ವಿಂಗಡಿಸಲು ಹೇಳಿದರೆ, ಸುನಿಲ್‌ನಿಂದ ಎರಡು ಬೇರೆ ಬೇರೆ ಬಣ್ಣಗಳನ್ನೂ, ಕೆಂಪು ಬಣ್ಣವನ್ನೂ ಹೆಸರಿಸುವ ಕ್ರಿಯೆಯನ್ನು ಮಾಡಿಸಲಾಗುತ್ತಿತ್ತು.

**ಊ) ಒತ್ತಾಯದ ಕಲಿಕೆಯನ್ನು ತಡೆಯಿರಿ:** ತನ್ನ ಸಾಮರ್ಥ್ಯಕ್ಕೆ ಮೀರಿದ ವಿಷಯಗಳನ್ನು ಕಲಿಯಲು ಮಗುವಿನ ಮೇಲೆ ಒತ್ತಡ ಹೇರಬೇಡಿ. ಗರಿಷ್ಠ ಮಟ್ಟದಲ್ಲಿ ಕಲಿಯಲು ಪ್ರಚೋದನೆ ನೀಡುವುದು ಸಮಂಜಸ, ಆದಾಗ್ಯೂ ಈ ಗರಿಷ್ಠದ ಮಿತಿಯನ್ನು ಸುಲಭವಾಗಿ ಹೇಳಲಾಗುವುದಿಲ್ಲ. ಅದು ಒಬ್ಬೊಬ್ಬ ಮಗುವಿಗೂ ಒಂದೊಂದು ರೀತಿ ಇರುತ್ತದೆ. ಮಗುವಿನ ಕಲಿಕೆಯ ಮಟ್ಟಕ್ಕೆ ಕಲಿಸಲು ಹೊರಟರೆ ಅದು ನಿಮಗೂ ಹಾಗೂ ಮಗುವಿಗೂ ಭಾವನಾತ್ಮಕವಾಗಿ ತೊಂದರೆಯಾಗುತ್ತದೆ. ಚೆನ್ನಾಗಿ ಕಲಿಯುತ್ತಿರುವ ಸಾಮಾನ್ಯ ಮಗುವಿನೊಂದಿಗೆ ಹೋಲಿಕೆ, ಪದೇ ಪದೇ ತಪ್ಪು ಹುಡುಕುವುದು, ಕಲಿಯಲಾಗದಿದ್ದಾಗ ಹತಾಶೆ, ಇವು ನಿಮ್ಮ ನಿರೀಕ್ಷೆಯ ಮಟ್ಟ ಹೆಚ್ಚಿಸದು ಮತ್ತು ನಿಮ್ಮ ಮಗುವಿನ ಕಲಿಯುವ ಸಾಮರ್ಥ್ಯ ಕಡಿಮೆಯದು ಎಂಬುದನ್ನು ಸೂಚಿಸುತ್ತದೆ.

**ಶ್ರೀಮತಿ ಸೀಮಾಳ ಮಗುವಿನ ಕಥೆ: ಅಸಾಧ್ಯವಾದ ಗುರಿಗಳು ಬೇಡ**

ಕುಂಠಿತ ಬೆಳವಣಿಗೆಯ ಮಗು ಎಂದು ಪರಿಗಣಿಸಲಾದ ತನ್ನ ಮೂರು ವರ್ಷದ ಮಗುವಿಗೆ ಶ್ರೀಮತಿ ಸೀಮಾ ಮಾಡಿಸಬೇಕಾದ ಚಟುವಟಿಕೆಗಳ ಪಟ್ಟಿಯನ್ನು ತಯಾರಿಸಿದ್ದರು. ಆ ಪಟ್ಟಿಯಲ್ಲಿ ನಿರ್ದಿಷ್ಟ ಪಡಿಸಿದ್ದ ಸುಮಾರು 20ಕ್ಕೂ ಹೆಚ್ಚು ಕೆಲಸಗಳನ್ನು ಅವಳ ಮಗುವಿನಿಂದ ಮಾಡಲಾಗಲಿಲ್ಲ. ಆದ್ದರಿಂದ ಸೀಮಾ ಮುಂದಿನ ಮೂರು ವಾರಗಳಿಗೆ ಆ ಎಲ್ಲಾ ಇಪ್ಪತ್ತು ವಿಷಯಗಳನ್ನೂ ಪಾಠ ಮಾಡುವ ತಯಾರಿ ಮಾಡಿದರು. ತಾಯಿಯಾಗಿ ಆಕೆಯ ಉದ್ದೇಶ ಸರಿಯಾದರೂ, ಅಸಾಧ್ಯವಾದುದನ್ನು ಆಕೆ ಸಾಧಿಸಲು ಹೊರಟಿದ್ದಾರೆ. ಆ ಮಗುವಿಗೆ 3 ವಾರಗಳಿಗೆ 3 ಅಥವಾ 4 ಗುರಿಗಳನ್ನು ಮಾತ್ರ ಇಟ್ಟುಕೊಳ್ಳಲು ಸಾಧ್ಯ.

ಖ) **ಅಸಹಾಯಕತೆಯನ್ನು ಬಿಡಿ:** ಒತ್ತಡ ಹೇರಿ ಕಲಿಸುವುದು ಎಷ್ಟು ಕೆಟ್ಟದ್ದೋ, ಅದಕ್ಕಿಂತ ಕೆಟ್ಟದ್ದು ನಿಮ್ಮ ಅಸಹಾಯಕ ಸ್ಥಿತಿ. ಏನೂ ಮಾಡಲು ತೋಚದೆ ಸುಮ್ಮನೆ ಕಾಲಹರಣ ಮಾಡುವವರನ್ನು ನಾವು ನೋಡುತ್ತೇವೆ. ಪ್ರಾಯಶ: ಈ ರೀತಿಯ ಪರಿಸ್ಥಿತಿಗೆ, ಅವರು ಹಲವಾರು ಬಾರಿ ಪ್ರಯತ್ನಿಸಿ ವಿಫಲರಾದುದೆ ಕಾರಣವಿರಬೇಕು. ಇವನಿಗೆ ಹೇಗೆ ಕಲಿಸುವುದು? ನನಗೇನೂ ತೋಚುತ್ತಿಲ್ಲ? ಎಷ್ಟು ಕಲಿಸಿದರೂ ಮಗುವು ಏನೂ ಕಲಿಯುತ್ತಿಲ್ಲವಲ್ಲ? ಇದರಿಂದ ನನಗೆ ಬಿಡುಗಡೆಯೇ ಇಲ್ಲವೇ– ಇತ್ಯಾದಿ ಭಾವನೆಗಳು ಬರುತ್ತವೆ. ಈ ಭಾವನೆಗಳು ಬೆಳೆಯುತ್ತ 'ನಕಾರಾತ್ಮಕ ಚಿಂತನೆ', 'ಅಸಹಾಯಕತೆ' ನಿರಾಶವಾದ ನನ್ನಿಂದ ಮಾಡಲು ಆಗದು ಎಂಬ ಭಾವನೆಗಳು ಬೆಳೆಯುತ್ತಾ ಹೋಗುತ್ತವೆ. ನಿಜ ಇಂತಹ ಮಕ್ಕಳಿಗೆ ಪಾಠ ಹೇಳುವ ಹಾದಿ ಸಾಮಾನ್ಯ ಮಕ್ಕಳಿಗೆ ಪಾಠ ಹೇಳಿದಂತೆ ಸುಗಮವಲ್ಲ. ತೃಪ್ತಿಕರವೂ ಅಲ್ಲ. ಆದರೆ, ಶಿಕ್ಷಕರ ಮಾನಸಿಕ ಧೈರ್ಯ, ಕೆಚ್ಚದೆ, ಬುದ್ಧಿಮಾಂದ್ಯ ಮಗುವು ಎಷ್ಟು ಸಾಧಿಸಲು ಸಾಧ್ಯವೋ ಅಷ್ಟನ್ನು ಅಚ್ಚುಕಟ್ಟಾಗಿ ಸಾಧಿಸುವ ನಿಟ್ಟಿನಲ್ಲಿ ಸಾಗಲು ಪ್ರೇರಣೆ ನೀಡುತ್ತದೆ. ಇದರಿಂದ ಸಿಗುವ ತೃಪ್ತಿ ಅದ್ವಿತೀಯ.



**ಕಲ್ಪನಳ ಕಥೆ –ಪುಟ್ಟಗುರಿ ನಿರಂತರ ಪ್ರಯತ್ನ**

ಆರು ವರ್ಷದ ಚಂದ್ರಿಕಳ ಅಮ್ಮ ಕಲ್ಪನ. ಚಂದ್ರಿಕಳಿಗೆ ತೀವ್ರತರದ ಬುದ್ಧಿಮಾಂದ್ಯತೆ ಮತ್ತು ಸೆರೆಬ್ರಲ್ ಪಾಲ್ಸಿ ಇದೆ. ಕಲ್ಪನ ಎಷ್ಟೋ ಜನ ತಜ್ಞರನ್ನು ಸಂಪರ್ಕಿಸಿದ್ದಾರೆ. ಗಂಡ ಹಾಗೂ ಕುಟುಂಬದ ಇತರ ಸದಸ್ಯರ ಸ್ವಲ್ಪ ಮಟ್ಟಿಗಿನ ನೆರವಿನಿಂದ ಮಗುವಿಗೆ ತರಬೇತಿ ನೀಡುತ್ತಿದ್ದಾರೆ. ಆದರೂ ಚಂದ್ರಿಕಳಲ್ಲಿ ಹೆಚ್ಚಿನ ಚೇತರಿಕೆ ಏನೂ ಕಾಣುತ್ತಿಲ್ಲ. ಕಲ್ಪನ ಹತಾಶಳಾದಳು. ಎಷ್ಟೋ ವೇಳೆ ಆಕೆಗೆ ನನ್ನ ಮಗುವಿಗೆ ತರಬೇತಿ ನಿಲ್ಲಿಸಿ ಬಿಡಬೇಕು ಎಂಬ ಭಾವನೆ ಬಂದಿತ್ತು. ಇವಳಿಗಾಗಿ ಏತಕ್ಕೆ ಇಷ್ಟೊಂದು ಸಮಯ ಹಾಗೂ ಶಕ್ತಿಯನ್ನು ವ್ಯಯಿಸಬೇಕು? ಈ ಎಲ್ಲಾ ಕಷ್ಟಕ್ಕೆ ನನಗೆ ಪ್ರತಿಫಲ ಏನು? ಇಷ್ಟೆಲ್ಲಾ ಕಷ್ಟಪಟ್ಟರೆ ನನ್ನ ಮಗುವು ಸಹಜ ಸ್ಥಿತಿಗೆ ಮರಳುತ್ತದೆಯೇ? ಇಂತಹ ನೂರೆಂಟು ಪ್ರಶ್ನೆಗಳು ಮನಸ್ಸಿನಲ್ಲಿ ಉದ್ಭವಿಸುತ್ತಿದ್ದವು. ಆದರೆ ಆಕೆ ಗಟ್ಟಿ ಮನಸ್ಸಿನ ಹೆಂಗಸು. ತನ್ನ ನಕಾರಾತ್ಮಕ ಮಾನಸಿಕ ಚಿಂತನಾ ಲಹರಿಯನ್ನು ಹೀಗೆಯೇ ಮುಂದುವರಿಯಲು ಬಿಡಲಿಲ್ಲ. ನಿರಂತರ ಪ್ರಯತ್ನದಿಂದ ಪುಟ್ಟದಾದ ಗುರಿಗಳನ್ನು ಇಟ್ಟುಕೊಂಡು ಮುನ್ನಡೆದು ಸ್ವಲ್ಪ ಹೆಚ್ಚೇ ಸಮಯ ತೆಗೆದುಕೊಂಡರೂ ಒಂದೊಂದಾಗಿ ಎಲ್ಲಾ ಗುರಿಗಳನ್ನೂ ಸಾಧಿಸಿದರು.

ಎ) **ಕಲಿಕೆಯ ವೇಗವನ್ನು ತೀರ್ಮಾನಿಸಿ:-** ವಿವಿಧ ವರ್ತನೆಯ ಕೌಶಲವನ್ನು ಕಲಿಯಲು ವಿವಿಧ ಹಂತಗಳಿವೆ. ಪ್ರತಿಯೊಬ್ಬ ಮಗುವೂ ಯಾವುದೋ ಒಂದು ಹಂತದಲ್ಲಿರುತ್ತದೆ. ಈ ಹಂತ ಯಾವುದೆಂದು ಕಂಡು ಹಿಡಿಯದಿದ್ದರೆ ಅಪೇಕ್ಷಿತ ಬೋಧನಾ ಗುರಿಯನ್ನು ಮುಟ್ಟಲು ಸಾಧ್ಯವಾಗದೇ ಇರಬಹುದು. ಮಗುವು ಕಲಿಯಲು ವಿಫಲವಾದರೆ, ಯಾವಾಗಲೂ ಮಗುವಿನ ತಪ್ಪು ಅಥವಾ ಸಾಮರ್ಥ್ಯವನ್ನೇ ಮಾನದಂಡವಾಗಿ ಇಟ್ಟುಕೊಳ್ಳಬೇಡಿ. ಮಗುವಿಗೆ ಕಲಿಯುಲಾಗದೆ ಇರುವುದಕ್ಕೆ ನಿಮ್ಮ ಬೋಧನೆಯ ರೀತಿಯೂ ಕಾರಣವಾಗಿರಬಹುದು. ಆದ್ದರಿಂದ, ಮಗುವಿನ ಕಲಿಕೆಯ ವೇಗಕ್ಕೆ ಅನುರೂಪವಾಗಿ ಬೋಧನೆಯನ್ನು ನೀಡಿ. ನಿಮಗೆ ಸೂಕ್ತವೆನಿಸಿದ ಪಠ್ಯ ವಸ್ತುವನ್ನು ಅಗತ್ಯವಿದೆ ಎಂದೆನಿಸಿದರೂ, ಒತ್ತಾಯದಿಂದ ಕಲಿಸಲು ಹೋಗಬೇಡಿ.

**ಶ್ರೀಮತಿ ಪಂಡಿತ್ ಎಲ್ಲಿ ತಪ್ಪಿದರು?**

ಶ್ರೀಮತಿ ಪಂಡಿತ್ ತನ್ನ ಐದು ವರ್ಷದ ಮಗುವಿಗೆ ಆಕೃತಿಗಳ ಬಗ್ಗೆ ಹೇಳಿಕೊಡುತ್ತಿದ್ದರು. ಅವರು ಮೊದಲಿಗೆ ವೃತ್ತ, ಚೌಕ, ತ್ರಿಕೋನ, ವಜ್ರಾಕಾರ, ಆಯತ, ನಕ್ಷತ್ರಾಕಾರಗಳನ್ನು ಕತ್ತರಿಸಿ ತೋರಿಸಿದರು. ಪ್ರತಿಯೊಂದನ್ನೂ ಮಗುವಿಗೆ ತೋರಿಸುತ್ತಾ ಅದರ ಹೆಸರು ಹೇಳಿದರು. ತಕ್ಷಣ ಮಗು ಸರಿಯಾದ ಆಕೃತಿಯನ್ನು ಗುರುತಿಸಿತು. ಮಾರನೆಯ ದಿನ ಕೇಳಿದಾಗ ಮಗುವಿಗೆ ಗೊಂದಲ ಉಂಟಾಯಿತು. ಇದೇ ಚಟುವಟಿಕೆ ಮುಂದುವರಿಯುತ್ತಾ ವಜ್ರಾಕಾರ, ಚೌಕ, ಆಯತಕ್ಕೆ ವ್ಯತ್ಯಾಸ ತಿಳಿಯದೆ ಹೋಯಿತು. ಮಗುವಿಗೆ ಆಕೃತಿಗಳ ಬಗ್ಗೆ ತಿಳಿಸುವ ತನ್ನ ಉದ್ದೇಶ ನೆರವೇರದೆ ಹೋದುದಕ್ಕಾಗಿ ಶ್ರೀಮತಿ ಪಂಡಿತ್ ಬೇಸರಗೊಂಡರು. ಶ್ರೀಮತಿ ಪಂಡಿತ್ ಎಲ್ಲಿ ತಪ್ಪಿದರು? ನೀವೆ ಹೇಳಿ?

ಏ) **ಮಾತಿನ ವೈಖರಿ ತಪ್ಪಿದ್ದರೆ ಸರಿಪಡಿಸಿ:-** ಯಾವುದೇ ತರಬೇತಿ ಕಾರ್ಯಕ್ರಮದ ಯಶಸ್ಸಿನಲ್ಲಿ ಪೋಷಕರು, ಶಿಕ್ಷಕರು ಮತ್ತು ಮಗುವಿನ ನಡುವೆ ನಡೆಯುವ ಸಂಭಾಷಣೆ ಮಹತ್ವದ ಪಾತ್ರ ವಹಿಸುತ್ತದೆ. ತಪ್ಪು ಅರ್ಥ ಕಲ್ಪಿಸಿಕೊಳ್ಳಲು ಸಾಧ್ಯವಾಗುವಂತಹ ಮಾತುಗಳಿಂದ ಪೋಷಕ-ಶಿಕ್ಷಕ-ಮಗುವಿನ ಸಂಬಂಧದಲ್ಲಿ ತೀವ್ರ ತರದ ಸಮಸ್ಯೆಯನ್ನು ತಂದೊಡ್ಡಬಹುದು. ಪದೇ ಪದೇ ಮಾತಿನ ನಡುವೆ ಶಿಕ್ಷಕರು ಮಗುವನ್ನು ಇತರ ಮಕ್ಕಳೊಂದಿಗೆ ಹೋಲಿಸುತ್ತಿದ್ದರೆ ತನಗೆ ಅರಿವಿಲ್ಲದಂತೆಯೇ ಮಗುವು ಅವರನ್ನು ದ್ವೇಷಿಸಲು ತೊಡಗುತ್ತದೆ. ಕೆಲವು ಸಂದರ್ಭಗಳಲ್ಲಿ ನಿಮ್ಮ ಮನಸ್ಸಿನಲ್ಲಿರುವ ಉದ್ದೇಶಕ್ಕೂ ಮಗುವು ಅದನ್ನು ಅರ್ಥಮಾಡಿಕೊಂಡ ರೀತಿಗೂ ತಾಳೆಯಾಗುವುದಿಲ್ಲ. ಉದಾಹರಣೆಗೆ ಉತ್ತಮ ವರ್ತನೆಯುಳ್ಳ ಮಗುವೊಂದನ್ನು ಮಾದರಿಯಾಗಿ ತೋರಿಸುವ ನಿಮ್ಮ ಉದ್ದೇಶ, ಈ ಮಗುವೂ ಆ ವರ್ತನೆಯನ್ನು ಕಲಿಯಲಿ ಎಂಬುದೇ ಆಗಿರುತ್ತದೆ. ಆದರೆ, ನೀವು ಉಪಯೋಗಿಸುವ ಪದಗಳು, ಹೇಳುವ ರೀತಿ, ಇವು ಮಗುವಿಗೆ ನೀವು ಅವನನ್ನು ಹೋಲಿಕೆ ಮಾಡುತ್ತಿದ್ದೀರ.



**ರಾಧಾಳ ತಾಯಿ ಏಕೆ ವಿಫಲರಾದರು?**

ರಾಧಾಳ ತಾಯಿ ರಾಧಳಿಗೆ ಬಯ್ಯುತ್ತಿದ್ದಾರೆ. "ನೀನು ಏಕೆ ಅರುಣ್‌ನ ಹಾಗೆ ವರ್ತಿಸಬಾರದು? ನೋಡು ಅವನು ಎಷ್ಟು ಶಿಸ್ತಿನಿಂದ ಇದ್ದಾನೆ." ಇಲ್ಲಿ ತಾಯಿಯ ಉದ್ದೇಶ ರಾಧಳು ಅರುಣ್‌ನನ್ನು ನೋಡಿ ಅವನಲ್ಲಿರುವ ಶಿಸ್ತಿನ ನಡತೆಯನ್ನು ಕಲಿಯಲಿ ಎಂಬುದು. ಈ ಹೋಲಿಕೆಯಿಂದ ಅಸಮಾಧಾನಗೊಂಡ

ರಾಧಾ ತಾಯಿಗೆ ಏರಿದ ಧ್ವನಿಯಲ್ಲಿ ಹೇಳುತ್ತಾಳೆ "ಅಮ್ಮಾ! ನನಗೆ ಗೊತ್ತು. ನಿನಗೆ ಯಾವಾಗಲೂ ಅರುಣ್‌ನನ್ನು ಕಂಡರೆ ಪ್ರೀತಿ. ಆದಕ್ಕೆ ನೀನು ಅವನನ್ನು ಹೊಗಳುತ್ತಿರುತ್ತೀಯ. ನೀನು ನನ್ನನ್ನು ದ್ವೇಷಿಸುತ್ತೀಯ" ಹೌದಲ್ಲ? ರಾಧಾಳ ತಾಯಿ ಏಕೆ ವಿಫಲರಾದರು ತಿಳಿಯಿತಲ್ಲ?

ಐ) **ಪೂರ್ವಾಗ್ರಹ ಸಿದ್ಧಾಂತ ಮತ್ತು ಎಲ್ಲರೆದುರು ಪ್ರಚಾರ:** ನಿಮ್ಮ ಹಾಗೂ ಮಗುವಿನ ನಡುವೆ ನಡೆಯುವ ಹಲವಾರು ಬೋಧನಾ ಅವಧಿಗಳು ನಿಮ್ಮ ತಿಳುವಳಿಕೆಗೆ ಮೀರಿದ, ಉದ್ದೇಶ ಪೂರ್ವಕವಲ್ಲದ ಸಮಸ್ಯೆಗಳಿಗೆ ದಾರಿಯಾಗುವ ಸಾಧ್ಯತೆ ಇದೆ. ಉದಾಹರಣೆಗೆ ಎಲ್ಲರೆದುರಿಗೆ ತಾಯಿಯು 'ನನ್ನ ಮಗುವಿಗೆ ಒಂದು ಆಹಾರ ಇಷ್ಟ ಇಲ್ಲ' -ಎಂದು ಹೇಳುವುದು ಮಗುವು ತಾನೇ ತಾನಾಗಿ ಆ ಆಹಾರ ಪದಾರ್ಥದ ಬಗ್ಗೆ ಉದಾಸೀನ ತಾಳುವಂತೆ ಮಾಡುತ್ತದೆ. ಹಾಗೆಯೇ ಮಕ್ಕಳ ಸ್ವಭಾವಗಳಾದ ಯಾರೊಂದಿಗೂ ಬೆರೆಯದ ತನ್ನ ಪಾಡಿಗೆ ತಾನಿರುವಂತಹ ವರ್ತನೆಗಳನ್ನು ಬೇರೆಯವರೆದುರಿಗೆ ಆಗಾಗ್ಗೆ ಹೇಳುತ್ತಿರುವುದು, ಪರೋಕ್ಷವಾಗಿ ಆ ಮಗುವಿಗೆ 'ನೀನು ಆ ರೀತಿ ವರ್ತಿಸು' ಎಂದು ಹೇಳಿದಂತೆ ಆಗುತ್ತದೆ. ಸಂದರ್ಭಕ್ಕನುಗುಣವಾಗಿ ತನ್ನಿಂದ ತಾನೇ ಕಲಿತ ಕೆಲವು ವಿಷಯಗಳು ನಿಗದಿಪಡಿಸಿದ ಕಾರ್ಯಕ್ರಮಗಳನ್ನು ರೂಪಿಸಿ ಮಾಡಿದ ಪಾಠಕ್ಕಿಂತ ಗಟ್ಟಿಯಾಗಿ ಮಕ್ಕಳಲ್ಲಿ ಬೇರೂರುತ್ತವೆ.

**ಅಂಕಿತ ಬರವಣಿಗೆಯನ್ನು ದ್ವೇಷಿಸುತ್ತಾಳೆ-ಏಕೆ?**

ಅಂಕಿತಳಿಗೆ ಅವಳ ಹೆಸರನ್ನು ಓದಲು ಮತ್ತು ಬರೆಯಲು ಕಲಿಸಲಾಗಿತ್ತು. ತನ್ನ ಮಗಳಿಗೆ ಬರವಣಿಗೆಯಲ್ಲಿ ಆಸಕ್ತಿ ಇಲ್ಲ ಎಂಬುದು ಆ ತಾಯಿಯ ಅನಿಸಿಕೆ. ಮಗಳ ಎದುರೇ ಆಕೆ ಎಲ್ಲರೊಂದಿಗೆ ಈ ವಿಚಾರವನ್ನು ಹೇಳುತ್ತಿರುತ್ತಾರೆ. ''ನನ್ನ ಮಗಳು ಬರವಣಿಗೆಯನ್ನು ದ್ವೇಷಿಸುತ್ತಾಳೆ'', ''ಅಂಕಿತಳಿಗೆ ಓದಲು ಬರೆಯಲು ಏನಾದರೂ ಕೊಟ್ಟು ನೋಡಿ, ಅವಳ ನಿಜ ಸ್ವರೂಪ ಬಯಲಾಗುತ್ತದೆ'', ''ಬರೆಯಲು ಹೇಳಿದರೆ ಅವಳು ಸುತ್ತಲಿನ ವಸ್ತುಗಳನ್ನು ಎಸೆಯಲು, ಕಿರುಚಲು ಪ್ರಾರಂಭಿಸುತ್ತಾಳೆ'' ಇತ್ಯಾದಿ. ಅಂಕಿತಳ ತಾಯಿ ತನ್ನ ನೆರೆಮನೆಯಾಕೆಯೊಡನೆ ಹೇಳುತ್ತಿರುವ ತನ್ನ ಪ್ರತಾಪಗಳನ್ನು ಅಲ್ಲೇ ಕುಳಿತು ಆಸಕ್ತಿಯಿಂದ ಅಂಕಿತ ಕೇಳಿಸಿಕೊಳ್ಳುತ್ತಿರುತ್ತಾಳೆ. ಮೆಲುನಗುವಿನಿಂದ ಅವರ ಮುಖಭಾವವನ್ನು ಗಮನಿಸುತ್ತಿರುತ್ತಾಳೆ. ತಾಯಿ ಬಹಿರಂಗಪಡಿಸಿದ, ತನಗೇ ತಿಳಿದಿರದ ತನ್ನ ಈ ಕೆಲವು ವರ್ತನೆಗಳನ್ನು ಅವಳು ಕಲಿಯುವುದೇ ಸರಿ!! ಮತ್ತು ಆ ರೀತಿ ಮಾಡುವುದೇ ಸರಿ- ಎಂದು ತಿಳಿಯುತ್ತಾಳೆ.

ಒ) **ಕಲಿಕಾ ಸಂದರ್ಭಗಳಲ್ಲಿ ಅವಕಾಶಗಳ ಕೊರತೆ:** ಹಲವಾರು ಅಂಗವಿಕಲ ಮಕ್ಕಳು ಪೂರಕವಾದ ಸಂದರ್ಭ ಹಾಗೂ ಅವಕಾಶಗಳಿಂದ ವಂಚಿತರಾಗುತ್ತಾರೆ. ಸಹಜವಾಗಿ ಪೋಷಕರು ತಮ್ಮ ಸಾಮಾನ್ಯ ಮಕ್ಕಳಿಕಗೆ ಕಲಿಸುವಲ್ಲಿ ಮಗ್ನರಾಗಿರುತ್ತಾರೆ. ಅಲ್ಲದೆ ತಮ್ಮ ವಿಶೇಷ ಅಗತ್ಯವಿರುವ ಮಕ್ಕಳಿಗೂ ಕಲಿಕೆಗೆ ಪೂರಕವಾದ ವಾತಾವರಣವನ್ನು ಕಲ್ಪಿಸಿರುತ್ತಾರೆ. ಆದರೆ ಈ ಮಕ್ಕಳಿಗೆ ಎಲ್ಲಕ್ಕಿಂತ ಮಿಗಿಲಾಗಿ ಬೇಕಾಗಿರುವ ಸಾಕಷ್ಟು ಪ್ರಮಾಣದ ಪ್ರಚೋದನೆ, ಅವಕಾಶ ದೊರೆತಿರುವುದಿಲ್ಲ. ಈ ಮಕ್ಕಳ ಹಲವಾರು ಕೌಶಲಗಳ ಕೊರತೆಗೆ ಪ್ರಮುಖ ಕಾರಣ, ಅವರಿಗೆ ಆ ಸಾಮರ್ಥ್ಯವನ್ನು ಬಳಸುವ ಸಂದರ್ಭ ದೊರಕದೆ ಇರಬಹುದು. ಉದಾಹರಣೆಗೆ ಕೈ ಕತ್ತರಿಸಿಕೊಳ್ಳುತ್ತಾರೆಂಬ ಭಯದಿಂದ ತರಕಾರಿ ಹೆಚ್ಚಲು ಚಾಕುವನ್ನು ಕೊಡದೇ ಇದ್ದರೆ, ಚಾಕುವನ್ನು ಉಪಯೋಗಿಸಲು ಕಲಿಯುವುದಾದರೂ ಹೇಗೆ? ಆದ್ದರಿಂದ, ಮಕ್ಕಳಿಗೆ ಕಲಿಕಾ ಅನುಭವಗಳನ್ನು ಸ್ವತ: ಅನುಭವಿಸುವ ಸಂದರ್ಭ ಹಾಗೂ ಕಲಿಯಲು ಒತ್ತಾಸೆ ನಿರಂತರವಾಗಿ ಸಿಗಬೇಕು.

**ಜಗದೀಶ ತನ್ನ ಕೆಲಸವನ್ನು ತಾನೇ ಮಾಡಬಲ್ಲ-ಅವಕಾಶ ಕೊಟ್ಟು ನೋಡಿ**

7 ವರ್ಷದ ಜಗದೀಶನನ್ನು ನಿಧಾನಗತಿಯ ಬೆಳವಣಿಗೆ ಹಾಗೂ ಮಾತು ನಿಧಾನ ಎಂಬ ಅನುಮಾನಗಳೊದಿಗೆ ಕರೆ ತಂದರು. ಪೋಷಕರು ಮಗುವಿಗೆ "ಅಂಗಿಯ ಗುಂಡಿ ಹಾಕಿಕೊಳ್ಳಲು ಬರುವುದಿಲ್ಲ, ತಾನೇ ತಿಂಡಿ ತಿನ್ನುವುದಿಲ್ಲ, ಸ್ವತ: ಕೈ ತೊಳೆದುಕೊಳ್ಳುವುದಿಲ್ಲ" ಎಂದು ವಿವರಿಸಿದರು. ಅದಕ್ಕೆಂದೇ ನಿಯಮಿಸಿರುವ ಕೆಲಸದಾಕೆಯೇ ಅದನ್ನೆಲ್ಲಾ ಮಾಡುತ್ತಾಳೆಂದು ಅವರು ನಿವೇದಿಸಿಕೊಂಡರು. ಸೂಕ್ಷ್ಮವಾಗಿ ಗಮನಿಸಿದಾಗ ಜಗದೀಶ, ಪೋಷಕರು ಅಂದುಕೊಂಡಷ್ಟು ಅಸಮರ್ಥನಲ್ಲ ಎಂದು ಗೋಚರಿಸಿತು. ತನ್ನನ್ನು ತಾನು ನೋಡಿಕೊಳ್ಳುವ ಅವಕಾಶವೇ ಅವನಿಗೆ ಸಿಕ್ಕಿರಲಿಲ್ಲ. ಚಿಕಿತ್ಸಾ ಸಂದರ್ಭದಲ್ಲಿ ತಂದೆ ತಾಯಿ 'ಜಗದೀಶ ಮಾಡುವುದಿಲ್ಲ' ಎಂದು ಹೇಳಿದ್ದ ಹಲವಾರು ಕೆಲಸಗಳನ್ನು ಅವನು ಮಾಡಿದುದನ್ನು ಚಿಕಿತ್ಸಕರು ಗಮನಿಸಿದರು.

ಓ) **ಶೀಘ್ರ ಪರಿಹಾರಕ್ಕೆಂದು ಯಾವುದೇ ಔಷಧಿಗಳೂ ಇಲ್ಲ:** ಮಗುವಿನಲ್ಲಿ ಕೊರತೆಯಿರುವ ವರ್ತನೆಯನ್ನು ಗುರುತಿಸಿ ಪ್ರತಿಯೊಂದಕ್ಕೂ ತರಬೇತಿ ನೀಡಲು ತಾಳ್ಮೆ ಮತ್ತು ಅತಿ ಹೆಚ್ಚು ಸಮಯ ತೆಗೆದುಕೊಳ್ಳುವ ಯೋಜನೆಯೊಂದರ ತಯಾರಿಯಾಗಬೇಕು. ಪೋಷಕರ ಅಭಿಲಾಷೆಯಂತೆ ಇದಕ್ಕೆ ಯಾವುದೇ ಸರಳ, ಶೀಘ್ರ ಸೂತ್ರಗಳೇನೂ ಇಲ್ಲ. ನೀವು ಅಂದುಕೊಳ್ಳುವ ಕೌಶಲಗಳನ್ನೆಲ್ಲ ಕಲಿಸಲು ಮಾತ್ರೆ, ಶಸ್ತ್ರ ಚಿಕಿತ್ಸೆ ಮುಂತಾದ ಶೀಘ್ರಫಲ ನೀಡುವ ಶುಶ್ರೂಷೆ ಏನೂ ಲಭ್ಯವಿಲ್ಲ. ಕೂಲಂಕಷವಾಗಿ ಪರಿಶೀಲಿಸಿ ಮಾಡಿದ ಯೋಜನೆ ಹಾಗೂ ಆ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ವಿಧಾನಗಳಿಂದ ಮಾತ್ರ ತರಬೇತಿ ನಿಜಕ್ಕೂ ಪರಿಣಾಮಕಾರಿ. ಈ ಸತ್ಯವನ್ನು ತಿಳಿಯದೆ ಪರಿಹಾರಕ್ಕಾಗಿ ಒಬ್ಬ ತಜ್ಞರಿಂದ ಮತ್ತೊಬ್ಬರ ಬಳಿಗೆ ಹೋಗಿ ಅವೈಜ್ಞಾನಿಕ ಪರಿಹಾರೋಪಾಯಗಳನ್ನು ಹುಡುಕುವುದು ಕೊನೆಯಿಲ್ಲದ ವ್ಯರ್ಥ ಪ್ರಯತ್ನ. ಈ ಅಲೆದಾಟದಲ್ಲಿ ಅಪರಿಮಿತ ಹಣದ ದುರ್ವಿನಿಯೋಗವಾಗುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಸರಿಯಾದ ತರಬೇತಿಯನ್ನು ಕಾರ್ಯಗತಗೊಳಿಸುವ ಅಮೂಲ್ಯ ಸಮಯ ಕಳೆದು ಹೋಗಿರುತ್ತದೆ.

**ಪಾಯಲ್ ಕಳೆದುಕೊಂಡದ್ದೇನು?**

ಯಾವುದೇ ಮಾತಿಗೂ ಮರುನುಡಿಯುವ 5 ವರ್ಷದ ಪಾಯಲ್‌ಳನ್ನು ಅವಳ ಪೋಷಕರು ಕರೆತಂದರು. ಹೆಸರು ಹಿಡಿದು ಕೂಗಿದರೆ, ಕೆಲವು ಸುಲಭ ಕೆಲಸಗಳನ್ನು ಹೇಳಿದರೆ ಕೆಲವೊಮ್ಮೆ ಮಾಡುತ್ತಿದ್ದಳು ಮತ್ತು ಕೆಲವೊಮ್ಮೆ ಮಾಡುತ್ತಿರಲಿಲ್ಲ. ಕೆಲವು ಸಂದರ್ಭಗಳಲ್ಲಿ 'ಪಪ್ಪ' 'ಮಮ್ಮ' ಎಂಬ ಪದಗಳನ್ನು ಉಚ್ಚರಿಸುತ್ತಿದ್ದಳು. ಅವಳ ಬೆಳವಣಿಗೆಯ ಈ ಏರುಪೇರನ್ನು ಕುಟುಂಬದ ಹಿರಿಯರಾದ ಅವಳ ತಾತ, "ಇದೇನೂ ವಿಶೇಷವಲ್ಲ" ಎಂದು ತಳ್ಳಿ ಹಾಕುತ್ತಿದ್ದರು. ಎಷ್ಟೋ ಮಕ್ಕಳನ್ನು ಬೆಳೆಸಿದ ಅನುಭವಿ ಅವರು. ನಿಧಾನವಾಗಿ ಮಾತನಾಡಿದ, ನಿಧಾನವಾಗಿ ನಡೆದ ಎಷ್ಟು ಮಕ್ಕಳನ್ನು ನೋಡಿರಲಿಲ್ಲ!! ಅವರ ಕುಟುಂಬ ವೈದ್ಯರ ತೀವ್ರ ಆಕ್ಷೇಪದ ನಂತರ ಪಾಯಲ್‌ಳ ಪೋಷಕರು ಅವಳನ್ನು ತಜ್ಞರ ಬಳಿ ಕರೆದೊಯ್ಯಲು ನಿರ್ಧರಿಸಿದಾಗ ಆಕೆಗೆ 5 ವರ್ಷ! ಈ ಸಂದರ್ಶನ ನರರೋಗ ತಜ್ಞರಿಂದ ಹಿಡಿದು, ಮಕ್ಕಳ ತಜ್ಞರು, ಹೋಮಿಯೋಪತಿ, ಆಯುರ್ವೇದ ಮುಂತಾದವರ ಬಳಿ ನಡೆಯಿತು. ಹಲವಾರು ರೀತಿಯ ವೈಕಲ್ಯಗಳನ್ನು ಪರಿಗಣಿಸಲಾಯಿತು. ಬುದ್ಧಿಮಾಂದ್ಯತೆಯೇ? ಶ್ರವಣದೋಷವಿರಬಹುದೇ? ಆಟಿಸಂ ಆಗಿರುವ ಸಾಧ್ಯತೆ ಇದೆಯೇ? ಹೀಗೆ, ತಲೆ ಬುರುಡೆಯ ಕ್ಷ ಕಿರಣ, ಇ.ಇ.ಜಿ, ಶ್ರವಣ ಪರೀಕ್ಷೆ, ಸಿ.ಟಿ ಸ್ಕ್ಯಾನ್, ಎಂ.ಆರ್.ಡಿ, ರಕ್ತ, ಮಲ, ಮೂತ್ರ ಪರೀಕ್ಷೆಗಳು ಒಂದರ ಹಿಂದೊಂದರಂತೆ ನಡೆದವು. ಬುದ್ಧಿಶಕ್ತಿ ಕೊರತೆಯೆಂದು ಪರಿಗಣಿಸಿದ ಕೆಲವರು ಬುದ್ಧಿ ಹೆಚ್ಚಿಸುವ ಮಿದುಳು ಟಾನಿಕ್ ಅನ್ನು ಕೊಡಲು ಸೂಚಿಸಿದರು. ಮತ್ತೊಬ್ಬರು ಅವಳಿಗೆ ಮೂರ್ಛೆರೋಗ ನಿರೋಧಕಗಳನ್ನು ಕೊಡಲು ಸೂಚಿಸಿದರು. ಏಕೆಂದರೆ ಮುಂದಕ್ಕೆ ಈ ತೊಂದರೆ ಬರದಿರಲಿ ಎಂದು! ಇವೆಲ್ಲ ಮುಗಿಯುವವರೆಗೂ ತಂದೆ ತಾಯಿಯರು ಮಗುವಿನ ಸಮಸ್ಯೆಯ ಬಗ್ಗೆ ಕತ್ತಲ ಕೂಪದಲ್ಲೇ ಇದ್ದರು. ನಿಜಕ್ಕೂ ಪಾಯಲ್ ಕಳೆದುಕೊಂಡದ್ದೇನು. ನೀವೇ ಹೇಳಿ?

ಔ) **ದೈಹಿಕ ಶಿಕ್ಷೆಯನ್ನು ಸಂಪೂರ್ಣವಾಗಿ ನಿಷೇದಿಸಿ:** ತತ್ತ್ವಕ್ಕನುಗುಣವಾಗಿ ದೈಹಿಕ ಶಿಕ್ಷೆಯನ್ನು ನೀಡಬಾರದೆಂದು ಎಲ್ಲರೂ ಒಪ್ಪಿಕೊಳ್ಳುವವರೇ. ತೀವ್ರ ರೀತಿಯ ದೈಹಿಕ ಶಿಕ್ಷೆಗಳಾದ ಬೆತ್ತದಿಂದ ಹೊಡೆಯುವುದು, ಬರೆಹಾಕುವುದು, ಎಲ್ಲರೆದುರು ಬೆತ್ತಲಾಗಿಸುವುದು, ಇವೆಲ್ಲ ಈಗ ಕಡಿಮೆಯಾಗಿದ್ದರೂ, ಸ್ವಲ್ಪ ಮಟ್ಟಿಗೆ ಈ ಶಿಕ್ಷೆಗಳೆಲ್ಲಾ ಈಗಲೂ ಮನೆ/ಶಾಲೆಗಳಲ್ಲಿ, ಶಾಲಾಪೂರ್ವ ಶಿಕ್ಷಣ ಕೇಂದ್ರಗಳಲ್ಲಿ ಕಾಣಸಿಗುತ್ತವೆ. ಮೇಜಿನ ಮೇಲಿನ ಬೆತ್ತ ಕೇವಲ ಸಾಂಕೇತಿಕ ಆಗಿರಬಹುದು. ಆದರೂ ಅದು ಮಗುವಿನ ಮನಸ್ಸಿನ ಮೇಲೆ ದುಷ್ಪರಿಣಾಮ ಬೀರುತ್ತದೆ. ಸಣ್ಣದಾಗಿ ಜಿಗುಟುವುದು, ಪಟ್ಟನೆ ಮುಖ/ತಲೆಗೆ ಹೊಡೆಯುವುದು, ದುರುಗುಟ್ಟಿ ನೋಡುವುದು, ಹಿರಿಯರ ವ್ಯಂಗ್ಯ ಟೀಕೆ, "ನೀನು ಮಾಡುವುದು ಸರಿಯಲ್ಲ" – ಎಂಬ ತೀಕ್ಷ್ಣ ನೋಟ ಇವೆಲ್ಲ ಮಕ್ಕಳ ಮುಗ್ಧ ಮನಸ್ಸಿನ ಮೇಲೆ ಪ್ರಭಾವ ಬೀರುತ್ತವೆ.

**ರಕ್ಷಿತ್‌ಗೆ ಕಲಿಯುಲು ಏಕೆ ನಿರಾಸಕ್ತಿ**

ನಿಧಾನಗತಿಯಲ್ಲಿ ಬೆಳೆಯುತ್ತಿರುವ ಬಾಲಕ 8 ವರ್ಷದ ರಕ್ಷಿತ್. ಅವನ ಎಲ್ಲಾ ಕೆಲಸಗಳೂ ನಿಧಾನ. ಅವನ ತಂದೆ ಅವನಿಗೆ ಸಂಖ್ಯಾ ಪರಿಕಲ್ಪನೆಯನ್ನು–ಸಂಖ್ಯೆಗಳನ್ನು ಹೇಳುವುದು, ಒಂದಾದ ನಂತರ ಮತ್ತೊಂದು ಬರೆಯುವುದು, ದೊಡ್ಡ ಸಂಖ್ಯೆ, ಚಿಕ್ಕ ಸಂಖ್ಯೆ ಗುರುತಿಸುವುದು, ಹತ್ತಕ್ಕಿಂತ ಕಡಿಮೆಯಿರುವ ಸಂಖ್ಯೆ ಆರಿಸುವುದು– ಇವೇ ಮೊದಲಾದ ಚಟುವಟಿಕೆಗಳನ್ನು ಮಾಡಿಸುತ್ತಿದ್ದರು. ಪಾಠ ಮಾಡುವಾಗ ಪದೇ ಪದೇ ಅವರು ಸಿಟ್ಟಾಗುತ್ತಿದ್ದರು ಮತ್ತು ಬೈಯ್ಯುತ್ತಿದ್ದರು. ಕೆಲವು ಸಲ ಹೊಡೆಯುತ್ತಿದ್ದರು ಸಹ. ಪಾಠ ಹೇಳುವ ಸಮಯದಲ್ಲೆಲ್ಲಾ ಬೆತ್ತವನ್ನು ಜೊತೆಯಲ್ಲಿ ಇರಿಸಿಕೊಳ್ಳುತ್ತಿದ್ದರು. ಅವರ ಪ್ರಕಾರ ಅದು ಬರೀ ಮಗನನ್ನು ಹೆದರಿಸಲು ಮತ್ತು ಅವನ ಸಹಕಾರ ಪಡೆಯಲು ಮಾತ್ರ. ಎಂತಹ ತಪ್ಪು ತಿಳುವಳಿಕೆ!! ಪ್ರತಿ ಸಲವೂ ತಂದೆಯನ್ನು ನೋಡಿದ ಕೂಡಲೇ ರಕ್ಷಿತ್ ಈ ಕಲಿಕೆಯ ಕಷ್ಟವನ್ನು ತಪ್ಪಿಸಿಕೊಳ್ಳಲು ಏನೋ ಒಂದು ಕುಂಟುನೆಪ ತೆಗೆಯುತ್ತಿದ್ದ.

ಕಲಿಕೆಗೆ ಪೂರಕವಲ್ಲದ ಇಂತಹ ಕೆಲವು ಋಣಾತ್ಮಕ ಅನುಭವಗಳು ಮಕ್ಕಳು ಕಲಿಕೆಯಲ್ಲಿ ನಿರುತ್ಸಾಹ ತಳೆಯುವಂತೆ ಮಾಡುತ್ತವೆ. ಅತೀವ ಕಾಳಜಿವಹಿಸುವ ತಂದೆ, ತಾಯಿ, ಶಿಕ್ಷಕರ ಉದ್ದೇಶ ಮಗುವು ಬೇಗನೆ, ಚೆನ್ನಾಗಿ ಕಲಿಯಲಿ ಎಂದೇ ಆಗಿದೆ. ಶಿಕ್ಷೆ ಕೊಟ್ಟ ತಕ್ಷಣ ಅವರ ತೀವ್ರತೆಯನ್ನು ತಡೆಯಲು ಅಪ್ಪಿಕೊಳ್ಳುವುದು, ಮುತ್ತಿಡುವುದು, ನಿನ್ನ ಒಳಿತಿಗೇ ನಾನು ಮಾಡಿದೆ ಎಂದು ಮಗುವಿನೊಡನೆ ತನ್ನ ವರ್ತನೆಯನ್ನು ಸಮರ್ಥಿಸಿಕೊಳ್ಳುವುದು ಇವೇ ಮುಂತಾದವನ್ನು ಮಾಡುತ್ತಾರೆ. ಮಗುವಿಗೆ ಶಿಕ್ಷೆ ಕೊಡಬಾರದೆಂಬುದು ಎಷ್ಟು ನಿಜವೋ, ಶಿಸ್ತಿನ ಕೊರತೆಯಾಗಬಾರದೆಂಬುದೂ ಅಷ್ಟೇ ನಿಜ.

ಸಾಮಾನ್ಯವಾಗಿ ಮಗುವಿನ ಸಮಸ್ಯೆಯ ಅರಿವಾದಾಗ ಪೋಷಕರ ಮೊದಲ ಪ್ರತಿಕ್ರಿಯೆಯೆಂದರೆ "ಆಘಾತ" ಎಲ್ಲಾ ಚೆನ್ನಾಗಿದ್ದು, ಒಂಭತ್ತು ತಿಂಗಳ ಸುಂದರ ಕನಸಿನ ಕೂಸು ಎಲ್ಲರಂತಲ್ಲ! ಈ ಆಘಾತ ಅಸಂಖ್ಯಾತ ಪ್ರಶ್ನೆಗಳ ಸರಮಾಲೆಯೊಂದಿಗೆ ಕುಟುಂಬದ ಸದಸ್ಯರನ್ನು ನೋವಿನ ಪ್ರಪಾತಕ್ಕೆ ತಳ್ಳುತ್ತದೆ. ಮುಂದುವರಿದು ತಮ್ಮ ತಪ್ಪು ಒಪ್ಪು ವಿಶ್ಲೇಷಣೆಗೆ ತೊಡಗುತ್ತಾರೆ. ಇವೆಲ್ಲದರ ಪ್ರಭಾವದಿಂದ ಸಿಟ್ಟು ಹತಾಶೆ ಒಟ್ಟಾಗಿ ತಲೆದೋರುತ್ತದೆ. ಈ ಸ್ಥಿತಿಯಲ್ಲಿ ಸಂಬಂಧಿಕರ, ನೆರೆಹೊರೆಯವರ ಅನುಕಂಪ ಹಾಗೂ ಸಲಹೆಗಳು ಮತ್ತಷ್ಟು ಒತ್ತಡ ತಂದೊಡ್ಡುತ್ತವೆ. ಅಂತಹ ಸಂದರ್ಭದಲ್ಲಿ ಪರಿಸ್ಥಿತಿಗೆ ಹೊಂದಿಕೊಳ್ಳಲು ಕೆಲವು ಸಲಹೆಗಳು:

1. ಇದೂ ಎಲ್ಲರಂತೆಯೇ ಒಂದು 'ಮಗು'. ಈ ಮಗುವಿಗೂ ನನ್ನ ಪ್ರೀತಿಯ ಅಗತ್ಯ ಇದೆ, ತನ್ನ ಆರೈಕೆಯ ನಿರೀಕ್ಷೆ ಇದೆ, ಈ ಮಗುವಿನಿಂದಲೂ ನನಗೆ ತಾಯ್ತನದ ಅನುಭವ ಸಿಗುತ್ತದೆ ಎಂದುಕೊಳ್ಳುವುದು.
2. ನಿಮ್ಮ ಕುಟುಂಬ ಹಾಗೂ ನೆರೆಹೊರೆಯವರಿಂದ ಸತ್ಯಾಂಶವನ್ನು ಬಚ್ಚಿಡುವ ಪ್ರಯತ್ನ ಮಾಡಬೇಡಿ.
3. ಒಂದೊಂದು ದಿನವನ್ನೂ ಒಂದು ಘಟಕವಾಗಿ ಇಟ್ಟುಕೊಳ್ಳಿ. ಭವಿಷ್ಯದ ಚಿಂತೆ ಬಿಡಿ.
4. ಬುದ್ಧಿಮಾಂದ್ಯತೆಯುಳ್ಳ ಮಗುವಿನ ಜನನ ಕುಟುಂಬದ ಎಲ್ಲಾ ಸದಸ್ಯರುಗಳನ್ನು ಒಂದಾಗಿಸುವಂತೆ ನೋಡಿಕೊಳ್ಳಿ.
5. ಸಮಾನ ದು:ಖಿಗಳಾದ ಇತರ ಪೋಷಕರನ್ನು ಭೇಟಿ ಮಾಡಿ ವಿಷಯ ಹಂಚಿಕೊಳ್ಳಿ.
6. ಹಳೆಯ ಕಟ್ಟು ಕಥೆಗಳನ್ನು ಬಿಟ್ಟು ಮಗುವಿನ ಬೆಳವಣಿಗೆಗೆ ನೀವು ಮಾಡಬೇಕಾಗಿರುವುದರ ಕಡೆಗೆ ಶೀಘ್ರವೇ ಗಮನಹರಿಸಿ.
7. ಮಗುವಿನೊಂದಿಗೆ ಆತ್ಮೀಯತೆಯಿಂದ ಬೆರೆತು ತರಬೇತಿ ಪ್ರಾರಂಭಿಸಿ. ನಿಮ್ಮ ಮಗುವಿನ ಬೆಳವಣಿಗೆಯನ್ನು ಆನಂದಿಸಿ.

ಇದುವರೆಗಿನ ಹಂತಗಳಲ್ಲಿ ಮಂದಗತಿಯಲ್ಲಿ ಕಲಿಯುವವರ ಮತ್ತು ಬುದ್ಧಿಮಾಂದ್ಯ ಮಕ್ಕಳ ರೀತಿ ನೀತಿಗಳನ್ನು ಗುರುತಿಸುವ ಬಗ್ಗೆ ಹಾಗೂ ಅವರಿಗೆ ತರಬೇತಿ ನೀಡಲು ಅನುಸರಿಸಬೇಕಾದ ಮಾರ್ಗದರ್ಶಿ ಉಪಾಯಗಳ ಬಗ್ಗೆ ತಿಳಿದುಕೊಂಡಿದ್ದೇವೆ.

ಮುಂದಿನ ಹಂತದಲ್ಲಿ ಈ ರೀತಿಯ ನ್ಯೂನತೆಯ ಮಕ್ಕಳಿಗೆ ಶೈಕ್ಷಣಿಕ ಕಲಿಕೆ ನೀಡುವ ಬೇರೆ ಯಾವುದಾದರೂ ಬದಲೀ ವ್ಯವಸ್ಥೆ ಇದೆಯೇ ಎಂಬುದರ ಕಡೆಗೆ ಗಮನ ಹರಿಸೋಣ.

ಅಧ್ಯಾಯ-5

# ಕಡಿಮೆ ಮಟ್ಟದ ಬುದ್ಧಿಶಕ್ತಿಯ ಮಕ್ಕಳ ಶೈಕ್ಷಣಿಕ ಕಲಿಕೆಗೊಂದು ಪರ್ಯಾಯ ವ್ಯವಸ್ಥೆ

ತಮಗೆ ಇರುವ ಕಡಿಮೆ ಮಟ್ಟದ ಬುದ್ಧಿಶಕ್ತಿಯ ಕಾರಣದಿಂದಾಗಿ, ನಿಧಾನಗತಿಯ ಕಲಿಕೆಯ ಹಾಗೂ ಬುದ್ಧಿಮಾಂದ್ಯ ಮಕ್ಕಳು, ಇತರೇ ಮಕ್ಕಳ ಕಲಿಕೆಯ ವೇಗಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದೇ ಹೋಗುತ್ತದೆ. ಉದಾಹರಣೆಗೆ 8ವರ್ಷ ವಯಸ್ಸಿನ ಬೌದ್ಧಿಕ ನ್ಯೂನತೆಯ ಮಗು 3ನೇ ತರಗತಿಯಲ್ಲಿ ಕಲಿಯುತ್ತಿರಬಹುದು. ಆದರೆ, ಆ ಮಗುವಿನ ಬೌದ್ಧಿಕ ಕಲಿಕಾ ಮಟ್ಟ ಒಂದನೇ ತರಗತಿ ಅಥವಾ ಅದಕ್ಕೂ ಕೆಳಗಿನ ಪೂರ್ವ ಪ್ರಾಥಮಿಕ ಮಟ್ಟದಲ್ಲೇ ಇರುವ ಸಾಧ್ಯತೆ ಹೆಚ್ಚಿರುತ್ತದೆ. ಇದು ಬರೇ ಆ ಮಗುವು ಕಲಿಯುವ ಪಠ್ಯ ವಿಷಯಗಳಿಗೆ ಮಾತ್ರವೇ ಅಲ್ಲ (ಭಾಷೆ, ಓದುವುದು, ಬರೆಯುವುದು, ಗಣಿತ) ಪಠ್ಯ ವಿಷಯಗಳಿಗೆ ಸಂಬಂಧಿಸದೇ ಇರುವ ಆ ಮಗುವಿನ ಇತರೇ ದೈನಂದಿನ ಚಟುವಟಿಕೆಗಳಿಗೂ ಅನ್ವಯವಾಗುತ್ತದೆ.

**ಹಾಗಾದರೆ ಆ ಮಗುವನ್ನು ಮತ್ತೆ ಒಂದನೇ ತರಗತಿಗೇ ಸೇರಿಸಿದರೆ?**

ಇಂತಹ ಸಂದರ್ಭಗಳಲ್ಲಿ ಬಹಳಷ್ಟು ತಂದೆ-ತಾಯಿಗಳು ಮೇಲಿನಂತೆಯೇ ಯೋಚಿಸುತ್ತಾರೆ. ತಮ್ಮ ಮಗುವಿನ ವಯಸ್ಸಿಗಿಂತ ಕಡಿಮೆ ವಯಸ್ಸಿನ ಮಕ್ಕಳೊಂದಿಗೆ ತರಗತಿಗೆ ಸೇರಿಸುವುದು ಸೂಕ್ತ ಎಂದು ಭಾವಿಸುತ್ತಾರೆ.

**ಆದರೆ, ಗಮನಿಸಿ.. ಹೀಗೆ ಮಾಡುವುದು ಖಂಡಿತಾ ತಪ್ಪು**

ತನಗಿಂತ ಕಡಿಮೆ ವಯಸ್ಸಿನ ಮಕ್ಕಳ ಜೊತೆಯಲ್ಲಿ ಮಗುವು ಮತ್ತೆ ಕಲಿಯಬೇಕೆಂದು ಒತ್ತಾಯಿಸುವುದರಿಂದ, ಮಗುವಿಗೆ ಯಾವ ಪ್ರಯೋಜನವೂ ಇರುವುದಿಲ್ಲ ಬದಲಾಗಿ ಆ ಮಗುವಿನ ಸಮಸ್ಯೆಗಳನ್ನು ಹೆಚ್ಚು ಮಾಡುತ್ತದೆ.

ವಾಸ್ತವವಾಗಿ, ಈ ರೀತಿಯ ನ್ಯೂನತೆಯಿರುವ ಮಗುವಿಗೆ 'ಏನನ್ನು ಕಲಿಸುತ್ತೇವೆ' ಎನ್ನುವುದಕ್ಕಿಂತ 'ಹೇಗೆ' ಕಲಿಸುತ್ತೇವೆ ಎನ್ನುವುದೇ ಒಂದು ದೊಡ್ಡ ಸವಾಲು! ನಿಜ.. ಈ ರೀತಿಯ ಮಗುವಿಗೂ ಒಂದನೇ ತರಗತಿಯ ಪಠ್ಯ ವಿಷಯಗಳ ಕಲಿಕೆ ಬೇಕು.. ಒಪ್ಪಿಕೊಳ್ಳೋಣ. ಆದರೆ, ನಿಧಾನಗತಿಯಲ್ಲಿ ಕಲಿಯುವ ಈ



ಮಗುವಿಗೆ 'ಯಾವ ರೀತಿಯಲ್ಲಿ ಕಲಿಸುತ್ತೇವೆ' ಮತ್ತು ಆ ಮಗುವಿನಲ್ಲಿರುವ ಗರಿಷ್ಠ ಮಟ್ಟದ ಕಲಿಕಾ ಸಾಮರ್ಥ್ಯವನ್ನು ಹೊರಗೆಳೆಯಲು 'ಯಾವ ವೇಗದಲ್ಲಿ ಕಲಿಸುತ್ತೇವೆ' ಎನ್ನುವುದೇ ಮುಖ್ಯ.

**ಹೆಚ್ಚು ಹೇಳುವುದೇನು?**

ಸಾಂಪ್ರದಾಯಿಕ ರೀತಿಯ ಕಲಿಕಾ ಮತ್ತು ಮೌಲ್ಯ ಮಾಪನದ ಶೈಕ್ಷಣಿಕ ಪದ್ಧತಿಗಳು ಈ ನ್ಯೂನತೆಯ ಮಕ್ಕಳಿಗೆ ಖಂಡಿತಾ ಹೊಂದುವುದಿಲ್ಲ.

ಈ ರೀತಿಯ ಮಕ್ಕಳಿಗೆ ಮಾಡುವ ತರಗತಿಯ ಪರೀಕ್ಷೆಗಳು ಖಂಡಿತಾ ಹೀಗಿರಬಾರದು.

1) ಅತೀ ಕಷ್ಟ ಮತ್ತು ಭಾರ ಎನಿಸುವಂತಹ ಪ್ರಶ್ನೆಗಳು.
2) ಪ್ರಬಂಧದ ರೂಪದಲ್ಲಿ ಉತ್ತರವನ್ನು ಅಪೇಕ್ಷಿಸುವ ಪ್ರಶ್ನೆಗಳು.
3) ಕಾವ್ಯ ಮತ್ತು ಪದ್ಯಗಳನ್ನು ಬಾಯಿಪಾಠ ಮಾಡಿ ಹೇಳುವುದು.
4) ವಾಕ್ಯ ಸಮುಚ್ಚಯಗಳನ್ನು (ಪ್ಯಾರಾಗಳನ್ನು) ಯಥಾವತ್ ಭಟ್ಟಿ ಇಳಿಸುವುದು ಇತ್ಯಾದಿ.



ಬಹುತೇಕ ಭಾರತೀಯ ಶಾಲೆಗಳಲ್ಲಿ ಮೇಲಿನ ರೀತಿಯ ಸಾಂಪ್ರದಾಯಿಕ ಪರೀಕ್ಷಾ ಮತ್ತು ಮೌಲ್ಯಮಾಪನ ಪದ್ಧತಿಗಳನ್ನು ಅನುಸರಿಸುತ್ತಿದ್ದು, ಈ ಪದ್ದತಿಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಲು ಮಂದಗತಿಯ ಕಲಿಕಾ ನ್ಯೂನತೆಯ ಮಕ್ಕಳಿಗೆ ಅಸಾಧ್ಯವಾಗಿರುತ್ತದೆ. ಈ ರೀತಿಯ ಮೌಲ್ಯ ಮಾಪನ ಪದ್ಧತಿಗಳಿಗೆ ನಿಧಾನಗತಿಯ ಕಲಿಕೆಯ ಮಕ್ಕಳು ಹೊಂದಿಕೊಳ್ಳುವುದೇ ಇಲ್ಲ. ಅಥವಾ ಇದನ್ನೇ ಹೀಗೆ ಹೇಳಬಹುದು. ನಿಧಾನಗತಿಯ ಕಲಿಕೆಯ ಮಕ್ಕಳಿಗೆ ಕಲಿಸಲು, ಮೌಲ್ಯಮಾಪನ ಮಾಡಲು ಈ ರೀತಿಯ ಸಾಂಪ್ರದಾಯಿಕ ಶಿಕ್ಷಣ ಪದ್ಧತಿ ಒಗ್ಗುವುದೇ ಇಲ್ಲ ಹಾಗಾದರೆ?

**ಈ ರೀತಿಯ ಮಕ್ಕಳಿಗೆ ಯಾವ ರೀತಿಯ ಪರೀಕ್ಷೆ ಮತ್ತು ಪ್ರಶ್ನೆಗಳು ಸೂಕ್ತ?**

ವಸ್ತು ಮತ್ತು ಉದ್ದೇಶದ ಆಧಾರಿತ (objective type) ಪರೀಕ್ಷಾ ಪದ್ಧತಿಯೇ ಬೇಕು.

ಉದಾಹರಣೆಗೆ
1) ಒಂದೇ ಪದದ ಉತ್ತರವನ್ನು ಅಪೇಕ್ಷಿಸುವ ಪ್ರಶ್ನೆಗಳು
2) ಬಿಟ್ಟಿರುವ ಪದಗಳನ್ನು ತುಂಬುವುದು.
3) ಪದಗಳನ್ನು ಹೊಂದಿಸಿ ಬರೆಯುವುದು.
4) ಸಣ್ಣ ಸಣ್ಣ ಒಗಟುಗಳನ್ನು, ಸಮಸ್ಯಾ ಬಂಧಗಳನ್ನು ಬಿಡಿಸುವುದು.
5) ಚಿತ್ರಗಳೊಂದಿಗೆ ಹೊಂದಾಣಿಕೆ.
6) ಪದಗಳನ್ನು ಗುರುತಿಸುವುದು ಇತ್ಯಾದಿ.

**ಇದು ಅತೀ ಮುಖ್ಯ:**

ಪರೀಕ್ಷೆಗಳು ಪ್ರಾಯೋಗಿಕವಾಗಿರಬೇಕು, ಸುಲಭವಾಗಿರಬೇಕು ಮತ್ತು ಅಸಂಗತವಾಗದೆ ಸುಸಂಗತವಾಗಿ ಚಿತ್ರಗಳಂತೆ ಮಗುವಿಗೆ ಕಾಣುವಂತೆ ಇರಬೇಕು.

**ಮಗುವಿನ ಈ ಎಲ್ಲಾ ಅವಶ್ಯಕತೆಗಳನ್ನು ಪೂರೈಸುವ ಶಾಲೆ ಇದೆಯೇ?**

ಖಂಡಿತಾ ಇದೆ. ಕಲಿಕಾ ನ್ಯೂನತೆಯ ಮತ್ತು ಮಂದಗತಿಯ ಕಲಿಕೆಯ ಮಕ್ಕಳ ವಿಶೇಷ ಅವಶ್ಯಕತೆಗಳನ್ನು ಪೂರೈಸಲು ಭಾರತ ಸರ್ಕಾರ ವಿಶೇಷ ಶಾಲೆಯ ವ್ಯವಸ್ಥೆ ಮಾಡಿದೆ. ಯಾವುದು ಆ ರೀತಿಯ ಶಾಲೆ?

**ಮುಕ್ತ ಶಾಲೆ**

ಹೌದು ರಾಷ್ಟ್ರೀಯ ಮುಕ್ತ ಶಾಲೆ ( N.I.O.S)

ಔಪಚಾರಿಕ ಶಿಕ್ಷಣ ವ್ಯವಸ್ಥೆಗೆ ಒಂದು ಒಳ್ಳೆಯ ಬದಲಿ ವ್ಯವಸ್ಥೆಯಾಗಿ ಅನೌಪಚಾರಿಕ ಶಿಕ್ಷಣ ವ್ಯವಸ್ಥೆಯುಳ್ಳ ರಾಷ್ಟ್ರೀಯ ಮುಕ್ತ ಶಾಲಾ ವ್ಯವಸ್ಥೆಯನ್ನು ಭಾರತ ಸರ್ಕಾರ ಆರಂಭಿಸಿದೆ. ಇದು ನಿಜಕ್ಕೂ ಒಂದು ಸ್ವಾಗತಾರ್ಹ ಬದಲೀ ವ್ಯವಸ್ಥೆ.

**ಈ ಶಾಲೆಯ ವ್ಯವಸ್ಥೆ ಯಾರಿಗೆ ಸರಿಯಾಗಿ ಹೊಂದುತ್ತದೆ?**

ಈ ಶಾಲೆಯ ಕಲಿಕಾ ವ್ಯವಸ್ಥೆ ಕೆಳಕಂಡ ರೀತಿಯ ಮಕ್ಕಳಿಗೆ ಸೂಕ್ತವಾಗಿ ಹೊಂದಿಕೊಳ್ಳುತ್ತದೆ.

1) ಶಾಲೆಯನ್ನು ಮಧ್ಯದಲ್ಲೇ ತೊರೆದ ಮಕ್ಕಳು (ವಿಶೇಷವಾಗಿ ಹೆಣ್ಣುಮಕ್ಕಳು).
2) ಮಂದಗತಿಯ ಕಲಿಕಾ ಸಮಸ್ಯೆಯುಳ್ಳ ಮಕ್ಕಳು.
3) ಬೌದ್ಧಿಕ ನ್ಯೂನತೆಯ ಮಕ್ಕಳು.
4) ಕಲಿಕಾ ನ್ಯೂನತೆಯ ಮಕ್ಕಳು.
5) ವರ್ತನಾ ನ್ಯೂನತೆಯ( Autistic) ಅಥವಾ ಆ ರೀತಿಯ ಮಕ್ಕಳು.

ಇಲ್ಲಿ ಮಕ್ಕಳಿಗೆ ನೀಡಲಾಗುವ ತರಬೇತಿಗಳು ನ್ಯೂನತೆಯ ಮಕ್ಕಳಿಗೆ ಬುನಾದಿಯ ರೂಪದ ತರಬೇತಿಗಳಾಗಿದ್ದು 7ನೇ ತರಗತಿ, ಪ್ರೌಢಾಪೂರ್ವ ಮತ್ತು ಪ್ರೌಢಶಾಲಾ ಮಟ್ಟದ ಕಲಿಕೆಗೆ ತತ್ಸಮಾನವಾಗಿರುತ್ತದೆ. ಅದಕ್ಕಾಗಿ ಕೆಳಕಂಡ ವಿಧಾನದ ಕಾರ್ಯಕ್ರಮವನ್ನು ಯೋಜಿಸಲಾಗಿದೆ.

**ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣಕ್ಕಾಗಿ (U.E.E.) ಮುಕ್ತ ಮೂಲ ಶಿಕ್ಷಣ (OBE) ಕಾರ್ಯಕ್ರಮ**

ಈ ಕಾರ್ಯಕ್ರಮದಲ್ಲಿ 3 ಹಂತಗಳಿರುತ್ತವೆ.

1) ಪೂರ್ವ ಸಿದ್ದತಾ ಕಲಿಕಾ ಕಾರ್ಯಕ್ರಮ ( 3ನೇ ತರಗತಿಗೆ ತತ್ಸಮಾನ)
2) ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ ( 5ನೇ ತರಗತಿಗೆ ತತ್ಸಮಾನ)
3) ಪ್ರೌಢ ಶಿಕ್ಷಣ ಕಾರ್ಯಕ್ರಮ ( 8ನೇ ತರಗತಿಗೆ ತತ್ಸಮಾನ)

ರಾಷ್ಟ್ರೀಯ ಮುಕ್ತ ಶಾಲೆಗಳನ್ನು ಆರಂಭಿಸುವ ಸಲುವಾಗಿ ಅರ್ಹ ಸಂಸ್ಥೆಗಳ ಪಟ್ಟಿಯನ್ನು ಈಗಾಗಲೇ ಗುರುತಿಸಲಾಗಿದೆ. ಆದರೆ, ಈ ರೀತಿಯ ನ್ಯೂನತೆ ಮತ್ತು ವಿಕಲತೆ ಇರುವ ಮಕ್ಕಳಿಗೆ ಮನೆಯೇ ಶಾಲೆಯ ರೂಪದಲ್ಲಿ ಪರಿವರ್ತಿತವಾಗಿ ಶಿಕ್ಷಣ ನೀಡುವಂತಾದರೆ ಸೂಕ್ತ. ಆ ದಿಸೆಯಲ್ಲಿ ಮನೆಯಲ್ಲೇ ಶಾಲೆಗಳಲ್ಲಿರುವ ಕಲಿಕಾ ಮಾದರಿಗಳನ್ನು, ಕಲಿಕಾ ಚಟುವಟಿಕೆಗಳನ್ನು ರಾಷ್ಟ್ರೀಯ ಮುಕ್ತ ಶಾಲೆಗಳು ಯೋಜಿಸಬೇಕಾಗಿದೆ.

**ಕರ್ನಾಟಕದಲ್ಲೂ ಒಂದು ಮುಕ್ತ ಶಾಲೆ !!**

ಹೌದು.. ಕರ್ನಾಟಕದಲ್ಲಿ **'ಕರ್ನಾಟಕ ಮುಕ್ತ ಶಾಲೆ' (K.I.O.S)** ಕನ್ನಡ ಭಾಷೆಯಲ್ಲಿ ರಾಷ್ಟ್ರೀಯ ಮುಕ್ತ ಶಾಲೆಯ ಆಶಯಗಳ ರೀತಿಯಲ್ಲಿ ಕಲಿಕಾ ನ್ಯೂನತೆಯ ಮಕ್ಕಳಿಗೆ ಕಲಿಸುತ್ತಲಿದೆ.

**ಕರ್ನಾಟಕ ಮುಕ್ತ ಶಾಲೆಯಲ್ಲಿ ಕಲಿಯಲು ಇರುವ ಅವಕಾಶಗಳೇನು?**

1) ಮಗು ತನ್ನ ಸ್ಥಳೀಯ ಭಾಷೆಯಲ್ಲಿ ಕಲಿಯಲು ಅವಕಾಶವಿರುತ್ತದೆ.
2) 25 ವಿಷಯಗಳ 5 ತರಬೇತಿ ಕೋರ್ಸ್ ಗಳಲ್ಲಿ ಯಾವುದಾದರೂ ಒಂದನ್ನು ಆರಿಸಿಕೊಳ್ಳಲು ಅವಕಾಶ ಇದೆ.
3) ಬಹುತೇಕ ಎಲ್ಲ ವಿಷಯಗಳಲ್ಲೂ ಪ್ರಾಯೋಗಿಕ ಅಂಶಗಳೇ ಹೆಚ್ಚು. ಉದಾ: ಬೆರಳಚ್ಚು, ಬೇಕರಿ, ಮರಗೆಲಸ, ಡಾಟಾ ಪ್ರೊಸೆಸಿಂಗ್ ಇತ್ಯಾದಿ. (ಸಾಂಪ್ರದಾಯಿಕ ಶಾಲಾ ಪಠ್ಯಗಳ ಜೊತೆಗೆ)
4) ನೋಂದಾಯಿತ ವಿದ್ಯಾರ್ಥಿ ಪ್ರತಿ ವಿಷಯಗಳಲ್ಲಿಯೂ ಪ್ರತ್ಯೇಕವಾಗಿ ಪರೀಕ್ಷೆಗಳನ್ನು ತೆಗೆದುಕೊಳ್ಳಬಹುದು. ಮತ್ತು ದೇಶದ ಯಾವುದೇ ನೋಂದಾಯಿತ ಕೇಂದ್ರಗಳನ್ನು ಸಂಪರ್ಕಿಸಿ, ಅಲ್ಲಿಯೇ ಪರೀಕ್ಷೆಗಳನ್ನು ತೆಗೆದುಕೊಳ್ಳುವ ಅವಕಾಶವಿರುತ್ತದೆ.
5) ಮಗುವಿಗೆ ವರ್ಷದಲ್ಲಿ ಎರಡು ಬಾರಿ (ಮೇ ಮತ್ತು ನವೆಂಬರ್ ತಿಂಗಳು) ಪರೀಕ್ಷೆಗಳನ್ನು ತೆಗೆದುಕೊಳ್ಳುವ ಅವಕಾಶವಿರುತ್ತದೆ.
6) ನ್ಯೂನತೆ ಇದೆ ಎಂದು ಅಧಿಕೃತವಾಗಿ ಗುರುತಿಸಿದ ಮಕ್ಕಳಿಗೆ ಪ್ರಶ್ನೆಗಳನ್ನು ಸುಲಭವಾಗಿ, ಮತ್ತು ಅವರಿಗೆ ಹೊಂದಿಕೊಳ್ಳುವಂತೆ ರಿಯಾಯಿತಿ ರೂಪದಲ್ಲಿಯೇ ತಯಾರಿಸಲಾಗಿರುತ್ತದೆ.
7) ಈ ಮೇಲಿನ ರೀತಿಯ ರಿಯಾಯಿತಿ ಮತ್ತು ಅನುಕೂಲಗಳಲ್ಲಿ
   ಅ) ಪರೀಕ್ಷೆಯ ಅವಧಿಯಲ್ಲಿ ಹೆಚ್ಚು ಸಮಯ ನೀಡುವಿಕೆ.
   ಆ) ದೃಷ್ಟಿ ನ್ಯೂನತೆ ಮತ್ತು ವರ್ತನಾ ನ್ಯೂನತೆಯ ವಿದ್ಯಾರ್ಥಿಗಳಿಗೆ ಪರೀಕ್ಷೆಗಳಲ್ಲಿ ಸಹಾಯಕರನ್ನು ನೀಡುವಿಕೆ.
   ಇ) ಅರೆದೃಷ್ಟಿ ಹೊಂದಿದವರಿಗೆ ದಪ್ಪ ಅಕ್ಷರಗಳ ಪ್ರಶ್ನೆ ಪತ್ರಿಕೆಗಳನ್ನು ನೀಡುವಿಕೆ ಇತ್ಯಾದಿಗಳು ಒಳಗೊಂಡಿರುತ್ತವೆ.

5 ಹಂತಗಳನ್ನು ಅಧ್ಯಯನ ಮಾಡಿದಾಗ ಇಂತಹ ಮಂದಗತಿಯಲ್ಲಿ ಕಲಿಯುವವರ ಮತ್ತು ಬುದ್ಧಿಮಾಂದ್ಯ ಮಕ್ಕಳ ತರಬೇತಿಗೆ ಸಾಕಷ್ಟು ತಯಾರಿ ಮಾಡಿಕೊಳ್ಳಬೇಕು ಎನಿಸುವುದು ಸಹಜ. ಮಾಹಿತಿ ನಮ್ಮಲ್ಲಿದೆ. ಇನ್ನೇಕೆ ತಡ. ಅಧ್ಯಯನ ಮಾಡಿದ ಕ್ರಮದಲ್ಲಿ ಅದನ್ನು ಜಾರಿಗೊಳಿಸುವುದೇ ತಾನೆ.

# ಸ್ವ – ಅಧ್ಯಯನ

## ಬೌದ್ಧಿಕ ನ್ಯೂನತೆ ಮತ್ತು ನಿಧಾನಗತಿಯಲ್ಲಿ ಕಲಿಯುವವರ ಬಗ್ಗೆ ಒಂದು ಪುಟ್ಟ ಪ್ರಶ್ನಾವಳಿ

| ಕ್ರಮ ಸಂಖೆ | ಪ್ರಶ್ನೆಗಳು | ಒಪ್ಪುತ್ತೇನೆ/ ಒಪ್ಪುವುದಿಲ್ಲ |
|---|---|---|
| 1. | ಬುದ್ಧಿಮಾಂದ್ಯತೆಗೆ ಮಾನಸಿಕ ಅಸ್ವಸ್ಥತೆ ಎನ್ನುತ್ತಾರೆ. | |
| 2. | ಜೀವನದ ಯಾವುದೇ ಸಮಯದಲ್ಲೂ ಒಬ್ಬ ವ್ಯಕ್ತಿ ಬುದ್ಧಿಮಾಂದ್ಯನಾಗುತ್ತಾನೆ. | |
| 3. | ಹೆಚ್ಚಿನ ಮಟ್ಟದ ಒತ್ತಡ ಹಾಗೂ ತೊಂದರೆಗಳಿಂದ ಕೆಲವರು ಬುದ್ಧಿಮಾಂದ್ಯರಾಗುತ್ತಾನೆ. | |
| 4. | ಗರ್ಭಿಣಿ ಹೆಂಗಸು ಗ್ರಹಣದ ದಿನ ಹೊರಗೆ ಬಂದರೆ ಮಗುವಿಗೆ ಬುದ್ಧಿಮಾಂದ್ಯತೆ ಬರುತ್ತದೆ. | |
| 5. | ಬುದ್ಧಿಮಾಂದ್ಯ ಮಕ್ಕಳ ಒಡನಾಟದಲ್ಲಿರುವ ಗರ್ಭಿಣಿ ಹೆಂಗಸು ಬುದ್ಧಿಮಾಂದ್ಯ ಮಕ್ಕಳಿಗೆ ಜನ್ಮ ಕೊಡುವ ಸಾಧ್ಯತೆ ಹೆಚ್ಚು. | |
| 6. | ಸಾಮಾನ್ಯ ಜನರೊಂದಿಗೆ ಹೋಲಿಸಿದರೆ, ಬುದ್ಧಿಮಾಂದ್ಯ ವ್ಯಕ್ತಿಗಳಿಗೆ 'ಚಿಕ್ಕ' ಮಿದುಳು ಇರುತ್ತದೆ. | |
| 7. | ಬುದ್ಧಿಮಾಂದ್ಯ ಮಕ್ಕಳಲ್ಲಿ ಕಂಡು ಬರುವ ವರ್ತನಾ ಸಮಸ್ಯೆಗಳಾದ ಇತರರಿಗೆ ಹೊಡೆಯುವುದು, ಅಳುವುದು, ವಸ್ತುಗಳನ್ನು ಎಸೆಯುವುದು, ಕ್ರೂರ ನಡವಳಿಕೆ ಇವು ಅವರ ಪ್ರಾಥಮಿಕ ಗುಣ ಲಕ್ಷಣಗಳು. | |
| 8. | ಸುಮಾರು ಶೇ.3ರಷ್ಟು ಜನರು ನಮ್ಮ ದೇಶದಲ್ಲಿ ಬೌದ್ಧಿಕ ವಿಕಲತೆಯುಳ್ಳವರಾಗಿರುತ್ತಾರೆ. | |
| 9. | ಬೌದ್ಧಿಕ ವಿಕಲತೆಯುಳ್ಳ ಎಲ್ಲರೂ ಒಂದೇ ರೀತಿ ಇರುತ್ತಾರೆ. | |
| 10. | ಬೆಳವಣಿಗೆ ಮತ್ತು ವಿಕಾಸದ ಗತಿಯಲ್ಲಿ ಬೌದ್ಧಿಕ ವಿಕಲತೆಯುಳ್ಳ ಮಕ್ಕಳು ನಿಧಾನ. | |
| 11. | ಬೌದ್ಧಿಕ ವಿಕಲತೆಯ ಜೊತೆಗೆ ಕೆಲವು ಮಕ್ಕಳಿಗೆ ಮೂರ್ಛೆ ರೋಗ, ದೃಷ್ಟಿದೋಷ, ಶ್ರವಣ ದೋಷಗಳು ಇರಬಹುದು. | |
| 12. | ದುರ್ಬಲ ಮನಸ್ಸಿರುವ ಸಾಮಾನ್ಯ ಮಕ್ಕಳನ್ನು ದುಷ್ಟಶಕ್ತಿಗಳು ಬುದ್ಧಿಮಾಂದ್ಯರನ್ನಾಗಿ ಮಾಡುತ್ತದೆ. (ದೆವ್ವ, ಪೀಡೆ, ಪಿಶಾಚಿ ಇತ್ಯಾದಿ) | |
| 13. | ಜೀವನದಲ್ಲಿ ಮದುವೆ, ಕೆಲಸ, ಓದು ಇವುಗಳಲ್ಲಿನ ವೈಫಲ್ಯತೆ, ಹತಾಶೆ ಮತ್ತು ನಿರಾಶೆ ವ್ಯಕ್ತಿಯನ್ನು ಬುದ್ಧಿಮಾಂದ್ಯರನ್ನಾಗಿ ಮಾಡುತ್ತದೆ. | |
| 14. | ಬೌದ್ಧಿಕ ವಿಕಲತೆ ಎಂಬುದು ಅವರ ಅದೃಷ್ಟ (ಹಣೆಬರಹ)ದಲ್ಲಿದೆ ಇದನ್ನು ತಡೆಗಟ್ಟಲು ಯಾರಿಗೂ ಏನೂ ಮಾಡಲೂ ಸಾಧ್ಯವಿಲ್ಲ. | |
| 15. | ಬೌದ್ಧಿಕ ವಿಕಲತೆಯನ್ನು ಗುಣಪಡಿಸಬಹುದು. | |
| 16. | ತಿನ್ನುವುದು, ಸ್ನಾನ ಮಾಡುವುದು, ಬಟ್ಟೆ ಧರಿಸುವುದು ಇವೇ ಮುಂತಾದ ದಿನ ನಿತ್ಯದ ಚಟುವಟಿಕೆಗಳನ್ನು ಬುದ್ಧಿಮಾಂದ್ಯ ಮಕ್ಕಳಿಗೆ ತರಬೇತಿಯ ಮೂಲಕ ಕಲಿಸುವುದಕ್ಕಿಂತ ನಾವೇ ಅವುಗಳನ್ನು ಅವರಿಗೆ ಮಾಡಿಕೊಡುವುದು ಸಮಯ ಹಾಗೂ ಶಕ್ತಿಯ ಉಳಿತಾಯ ಮಾಡಿದ ಹಾಗೆ ಆಗುತ್ತದೆ. | |

| | | |
|---|---|---|
| 17. | ಗರ್ಭಿಣಿ ಮಹಿಳೆ ಮದ್ಯ ಸೇವಿಸಿದರೆ ಗುಂಡಗೆ, ಆರೋಗ್ಯವಾಗಿರುವ ಮಗುವು ಹುಟ್ಟುತ್ತದೆ. | |
| 18. | ಗರ್ಭಾವಸ್ಥೆಯಲ್ಲಿ ಹೆಂಗಸು ತೀವ್ರ ಜ್ವರಕ್ಕೆ ಸಿಲುಕಿದರೆ ಅದರಿಂದ ಬೆಳೆಯುತ್ತಿರುವ ಮಗುವಿನ ಮಿದುಳಿಗೆ ಆಘಾತವಾಗಿ ಬೌದ್ಧಿಕ ವಿಕಲತೆ ಉಂಟಾಗುತ್ತದೆ. | |
| 19. | ಎಲ್ಲಾ ರೀತಿಯ ವಿಕಲಾಂಗ ಮಕ್ಕಳಿಗೆ ಒಂದೇ ತೆರನಾದ ಚಟುವಟಿಕೆಗಳನ್ನು ಒಂದೇ ರೀತಿಯಲ್ಲಿ ಕಲಿಸಬಹುದು | |
| 20. | ಬೌದ್ಧಿಕ ವಿಕಲತೆಯಿರುವ ಮಕ್ಕಳ ಸಮಸ್ಯೆಯನ್ನು ಸರಿಪಡಿಸಲು ಪ್ರೀತಿ ಮತ್ತು ಕಾಳಜಿ ಇವು ಸಾಕು. | |

## ಸ್ವ-ಅಧ್ಯಯನಕ್ಕೆ ಪ್ರಶ್ನೆಗಳು

1) ಬೌದ್ಧಿಕ ವಯಸ್ಸು ಎಂದರೇನು?
2) ಸಾಮಾಜಿಕ/ದೈಹಿಕ ವಯಸ್ಸು ಎಂದರೇನು?
3) ವ್ಯಕ್ತಿಗಳನ್ನು ಯಾವ ಅಂಶದ ಆಧಾರದ ಮೇಲೆ ಬುದ್ಧಿಮಾಂದ್ಯರೆಂದು ಗುರುತಿಸಿ ವಿಭಾಗಿಸುತ್ತೇವೆ?
4) ಬುದ್ಧಿಮಾಂದ್ಯತೆಯ ವಿವಿಧ ಹಂತಗಳಲ್ಲಿನ ಗರಿಷ್ಠ ಮಟ್ಟದ ಶೈಕ್ಷಣಿಕ ಅಪೇಕ್ಷೆಗಳು ಯಾವುವು?
5) ಮಂದಗತಿಯಲ್ಲಿ ಕಲಿಯುವ ಮಕ್ಕಳು ಬುದ್ಧಿಮಾಂದ್ಯ ವ್ಯಕ್ತಿಗಳಿಗಿಂತ ಹೇಗೆ ಬೇರೆ?
6) ಗರಿಷ್ಠ ಮಟ್ಟದ ಬುದ್ಧಿಮಾಂದ್ಯ ವ್ಯಕ್ತಿಗಳಿಗೂ ಮತ್ತು ತೀವ್ರತರ ಬುದ್ಧಿಮಾಂದ್ಯ ವ್ಯಕ್ತಿಗಳಿಗೂ ಇರುವ ವಿಶೇಷ ಸಮಸ್ಯೆಗಳು ಯಾವುವು?
7) ಬುದ್ಧಿಮಾಂದ್ಯ ವ್ಯಕ್ತಿಗಳ ಕೌಶಲ, ತರಬೇತಿ ಕಾರ್ಯಕ್ರಮಗಳನ್ನು ಯೋಜಿಸಲು ಇರುವ ವಿಧಾನಗಳು ಯಾವುವು?
8) ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ತರಬೇತಿ ನೀಡುವಾಗ ನಿಗದಿ ಪಡಿಸುವ ಗುರಿ ಯಾವುದು?
9) ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ಎಷ್ಟು ವಿಧಗಳಲ್ಲಿ ಗುರಿಗಳನ್ನು ನಿರ್ಧರಿಸಬಹುದು?
10) ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ಗುರಿಗಳನ್ನು ನಿರ್ಧರಿಸಲು ಯಾವುದಾದರು ಮಾರ್ಗದರ್ಶಿ ಸೂತ್ರಗಳು ಇವೆಯೆ?
11) ಬುದ್ಧಿಮಾಂದ್ಯ ಮಕ್ಕಳಿಗೆ ಇರುವ ಶಾಲಾಪೂರ್ವ ತರಬೇತಿಗಳು ಯಾವುವು?
12) ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ಇರುವ ವೃತ್ತಿಪೂರ್ವ ತರಬೇತಿಗಳು ಯಾವುವು?
13) ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ಇರುವ ವೃತ್ತಿ ಕೌಶಲಾಧಾರಿತ ತರಬೇತಿಗಳು ಯಾವುವು?
14) ಬುದ್ಧಿಮಾಂದ್ಯ ವ್ಯಕ್ತಿಗಳಿಗೆ ತರಬೇತಿ ನೀಡುವ ಸಂದರ್ಭದಲ್ಲಿ ಅನುಸರಿಸಬೇಕಾದ ಮೊಟ್ಟಮೊದಲ ಕಲಿಕಾ ಮಧ್ಯಸ್ಥಿಕೆಯ ಕಾರ್ಯಕ್ರಮ ಯಾವುದು?

**ಪೂರಕ ಪ್ರಶ್ನೆಗಳು**

1) ಬುದ್ಧಿಮಾಂದ್ಯತೆ ಎಂದರೇನು?
2) ಬುದ್ಧಿಶಕ್ತಿ ಸೂಚ್ಯಾಂಕ ಎಂದರೇನು?
3) ಸಾಮಾಜಿಕ ಸೂಚ್ಯಾಂಕ ಎಂದರೇನು?
4) ಮಾನವರಲ್ಲಿ ಗುರುತಿಸಬಹುದಾದ ಬುದ್ಧಿಶಕ್ತಿ ಸೂಚ್ಯಾಂಕಗಳ ವಿವಿಧ ಮಟ್ಟಗಳು ಯಾವುವು?
5) ಮಂದಗತಿಯಲ್ಲಿ ಕಲಿಯುವ ಮಕ್ಕಳಿಗೆ ಬೇರೆ ಯಾವ ಹೆಸರಿನಿಂದ ಕರೆಯಲಾಗುತ್ತಿದೆ?
6) ಬುದ್ಧಿಮಾಂದ್ಯ ವ್ಯಕ್ತಿಗಳ ವಿಶೇಷ ಗುಣಲಕ್ಷಣಗಳೇನು?
7) ಬುದ್ಧಿಮಾಂದ್ಯತೆ ಮತ್ತು ಮಾನಸಿಕ ಅಸ್ವಸ್ಥತೆ ಎರಡೂ ಒಂದೇ ಏನು?
8) ನಿಧಾನಗತಿಯ ಕಲಿಕೆಯವರು ಎಂದರೆ ಯಾರು ಮತ್ತು ಏನು?
9) ಕಲಿಕಾನ್ಯೂನತೆಯ ಮಕ್ಕಳು ಎಂದರೆ ಯಾರು ಮತ್ತು ಏನು?

## ಪೋಷಕರೆ/ಪಾಲಕರೆ

ನಮ್ಮ ಸುತ್ತಮುತ್ತಲಿನ ಮಕ್ಕಳೆಲ್ಲರೂ ಚುರುಕಾಗಿ ಕಲಿಯುವುದಿಲ್ಲ. ಹಲವಾರು ಕಾರಣಗಳಿಂದ ಅವರು ಕಲಿಯುವ ಗತಿ (ವೇಗ) ನಿಧಾನವಾಗಿರುತ್ತದೆ. ಅವರನ್ನು ಇತರೆ ಮಕ್ಕಳಿಗೆ ಹೋಲಿಸಿದಾಗ ಕಲಿಯುವಿಕೆಯಲ್ಲಿ ಬಹಳಷ್ಟು ಹಿಂದೆ ಇರುವುದು ಕಂಡು ಬರುತ್ತದೆ. ಇಂತಹ ಮಕ್ಕಳ ಕಲಿಕಾ ಅಭಿವೃದ್ಧಿಯ ಬಗ್ಗೆ ಗಮನ ಹರಿಸುವಾಗ ಈ ರೀತಿಯ ಮಕ್ಕಳಿಗೆ ವಿಶೇಷ ರೀತಿಯ ಗಮನ ಮತ್ತು ಕಲಿಕಾ ತಂತ್ರ ಜ್ಞಾನವನ್ನು ಬಳಸಬೇಕಾಗುತ್ತದೆ ಎಂದು ತಿಳಿದು ಬರುತ್ತದೆ.

ಇಂತಹ ಮಕ್ಕಳನ್ನು ಗುರುತಿಸುವಾಗ ಸರಿಯಾದ ಮತ್ತು ಕ್ರಮಬದ್ಧವಾದ ಮಾನದಂಡವನ್ನು ಅನುಸರಿಸಬೇಕಾಗುತ್ತದೆ. ಮಂದಗತಿಯಲ್ಲಿ ಅಥವಾ ನಿಧಾನಗತಿಯಲ್ಲಿ ಕಲಿಯುವ ಮಕ್ಕಳು ಯಾರು? ಅವರನ್ನು ಹೇಗೆ ಗುರುತಿಸುವುದು? ಬುದ್ಧಿ ಮಾಂದ್ಯ ಅಥವಾ ಬೌದ್ಧಿಕ ನ್ಯೂನತೆಯ ಮಕ್ಕಳಿಗೂ ಮತ್ತು ಮಂದಗತಿ/ನಿಧಾನಗತಿಯ ಕಲಿಕೆಯ ಮಕ್ಕಳಿಗೂ ಇರುವ ವ್ಯತ್ಯಾಸಗಳೇನು? ಅವರನ್ನು ನಿರ್ದಿಷ್ಟವಾಗಿ ಗುರುತಿಸುವ ಬಗೆ ಹೇಗೆ? ಈ ರೀತಿಯ ಮಕ್ಕಳ ಕಲಿಕಾ ಅಭಿವೃದ್ಧಿಗೆ ಬಳಸಬಹುದಾದ ತರಬೇತಿ ವಿಧಾನ ಯಾವುದು? ಈ ರೀತಿಯ ಮಕ್ಕಳ ಲಾಲನೆ–ಪಾಲನೆಯ ವಿಧಾನಗಳು ಯಾವುವು? ಇತ್ಯಾದಿ ಪ್ರಶ್ನೆಗಳಿಗೆ ಕ್ರಮಬದ್ಧವಾದ ಮಾಹಿತಿಯನ್ನು ಪಡೆದಾಗ ಮಾತ್ರ ಮಕ್ಕಳ ಕಲಿಕೆಗೆ ನಾವು ಹೆಚ್ಚು ಸಹಕಾರಿಯಾಗಬಹುದು.

ಮಂದಗತಿಯಲ್ಲಿ ಕಲಿಯುವ ಮಕ್ಕಳು ಮತ್ತು ಬೌದ್ಧಿಕ ನ್ಯೂನತೆಯ ಮಕ್ಕಳು ನಮ್ಮ ಮನೆಯಲ್ಲಿಯೇ ಇರಬಹುದು; ಶಾಲೆಯಲ್ಲಿ ಇರಬಹುದು; ನೆರೆಯಲ್ಲಿ ಇರಬಹುದು. ಸಾಮಾಜಿಕವಾಗಿ ಅವರ ಅಭಿವೃದ್ಧಿಗೆ ಮತ್ತು ಅವರ ನ್ಯೂನತೆಯ ಪರಿಹಾರದ ಪ್ರಯತ್ನಗಳಿಗೆ ಬೆಂಬಲಿಗರಾಗಿ ನಿಲ್ಲುವುದು ಮನುಷ್ಯರಾದ ನಮ್ಮ ಹೊಣೆಗಾರಿಕೆಯೇ ಆಗುತ್ತದೆ. ಇಂತಹ ಮಕ್ಕಳೂ ನೆಮ್ಮದಿಯ ಜೀವನ ನಡೆಸುವಂತೆ ಮಾಡುವುದು ನಮ್ಮ ಕರ್ತವ್ಯ ಎಂಬುದನ್ನು ಮರೆಯಬಾರದು. ಹೀಗಾಗಿ ಈ ರೀತಿಯ ನ್ಯೂನತೆಗಳ ಬಗ್ಗೆ ಸಹಕಾರಿಯಾಗಲು ಈ ನ್ಯೂನತೆಗಳಿರುವ ಮಕ್ಕಳ ಬಗೆಗೆ ಸರಿಯಾಗಿ ಅಧ್ಯಯನ ಮಾಡಬೇಕಾಗುತ್ತದೆ.

## ನಮ್ಮ ಸಂಸ್ಥೆಯ ಜನಶಿಕ್ಷಣ ಸಾಹಿತ್ಯದ ಪ್ರಕಟಣೆಗಳು

| | |
|---|---|
| ■ ಶ್ರವಣನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ಕೈಪಿಡಿ | ರೂ. 10/– |
| ■ ಸೀಳು ತುಟಿ ಹಾಗೂ ಸೀಳು ಅಂಗುಳು–ಪೋಷಕರಿಗೊಂದು ಕೈಪಿಡಿ | ರೂ. 10/– |
| ■ ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳಗಾಗಿ ಸಂಕಲಿತ ಆಟಿಕೆಗಳು –ಬಳಸುವವರ ಕೈಪಿಡಿ | ರೂ. 50/– |
| ■ ಶಾಲಾಪೂರ್ವ ತರಬೇತಿ ಕಾರ್ಯಕ್ರಮಗಳು | ರೂ. 10/– |
| ■ ಶ್ರವಣದೋಷ ತಡೆಗಟ್ಟುವಿಕೆಗೆ ಅನುಸರಿಸಬೇಕಾದ ಕ್ರಮಗಳು | ರೂ. 10/– |
| ■ ನಮ್ಮ ಮನೆಯಂಗಳದ ಹೂವು – ಸಚಿತ್ರ ಪುಸ್ತಕ | ರೂ. 15/– |
| ■ ಕಿವಿಮಾತು – ಕಿರುನಾಟಕ | ರೂ. 15/– |
| ■ ಸಫಲತೆಗಿದುವೆ ಸರಿದಾರಿ – ಬೀದಿನಾಟಕ | ರೂ. 15/– |
| ■ ಮೋನಿ ನಿಜಕೂ ಧೀರ – ಕಥನ ಗೀತೆ | ರೂ. 15/– |
| ■ ಪತ್ರ ಹೇಳದ ಕಥೆ – ಕಥನ ಪುಸ್ತಕ | ರೂ. 15/– |
| ■ ನಮ್ಮೊಳಗೊಬ್ಬರು – ಕಥನ ಪುಸ್ತಕ | ರೂ. 15/– |

| | |
|---|---|
| ■ 25 Golden Rules for Parents of Children with Hearing Impairment | Rs. 10/- |
| ■ Preschool Training Program for Children with Communication Disorders | Rs. 10/- |
| ■ Break the Barrier of Silence – Cochlear Implant | Rs. 25/- |
| ■ Things You Always Wanted to Know About Learning Disability | Rs. 25/- |
| ■ Toy Kit for Kids with Developmental Disabilities | Rs. 50/- |

ಇದೀಗ ಲಭ್ಯವಿದೆ ! ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ನಿಮಗೆಂದೇ ಪ್ರಸ್ತುತಪಡಿಸಿರುವ ಧ್ವನಿಸುರುಳಿ

**"ಕಿವಿಮಾತು"**

# ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ಮೈಸೂರು

ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಇಂದು ದೇಶವು ಹೆಮ್ಮೆಪಡುವಂತಹ ಸಂಸ್ಥೆಯಾಗಿ ಬೆಳೆದು ನಿಂತಿದೆ. ಈ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್-ಶ್ರವಣ ನ್ಯೂನತೆಯುಳ್ಳ ಜನರ ಸೇವೆಗೆ ಕಟಿಬದ್ಧವಾಗಿ ನಿಂತಿದೆ. ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ. ಸಂಸ್ಥೆಯ ಶಾಲಾಪೂರ್ವ ತರಬೇತಿ ಕೇಂದ್ರದಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳನ್ನು ಸಾಮಾನ್ಯ ಶಾಲೆಗಳಿಗೆ ಪ್ರವೇಶ ಪಡೆಯಲು ಅರ್ಹರನ್ನಾಗಿ ಮಾಡಲು ತರಬೇತಿ ನೀಡಲಾಗುತ್ತಿದೆ. ಸಂಸ್ಥೆಯಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳು 'ಅಂಗವಿಕಲರು' ಎನ್ನಿಸಿಕೊಳ್ಳುವುದಿಲ್ಲ. ಇಂತಹ ಮಕ್ಕಳನ್ನು 'ವಿಶೇಷ ಅರ್ಹತೆಯುಳ್ಳವರು' ಎಂದು ಪರಿಗಣಿಸಲಾಗುತ್ತದೆ. ಮಕ್ಕಳಲ್ಲಿರುವ ಈ 'ವಿಶೇಷ ಅರ್ಹತೆಗಳನ್ನು' ಬೆಳೆಸಿ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ನಮ್ಮ ಸಂಸ್ಥೆಯ ಮುಖ್ಯ ಆಶಯ. ಈ ನಿಟ್ಟಿನಲ್ಲಿ ನಿಮ್ಮ ಸಹಕಾರ ಬಹಳ ಮುಖ್ಯ.




**ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ**

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು - 570006

ದೂರವಾಣಿ: 2514449, 2515410, 2515805 ಟೆಲಿಫ್ಯಾಕ್ಸ್: 2510515

ಇಮೇಲ್: aiish_dir@yahoo.com ವೆಬ್‌ಸೈಟ್: www.aiishmysore.com

DMD.AIISH 2006